


# ಭಾವ-ಪ್ರಭಾತ

ಕತೆಗಾರರು:

ಹ. ಪೀ. ಜೋಶಿ ಬಿ. ಎ

Vol XIII Feb. 1937 No. II

ಪ್ರೇಮ ಪ್ರಕಟನಾಲಯ

— ಧಾರವಾಡ —







SOVEREIGN-REMEDY
AMRUTANJAN
Best Indian
Pain Balm
Amrutanjan Depots
BOMBAY, MADRAS

# ಶಂಕರ ಕರ್ನಾಟಕ ಪುಸ್ತಕ ಭಾಂಡಾರ

(ಮುಂಬಯಿ, ಹಿಂದುಸ್ತಾನ ಸರಕಾರ, ಮದ್ರಾಸ, ಯು. ಪಿ. ಮತ್ತು ಮೈಸೂರ ಸರಕಾರದ ಪ್ರಕಟನೆಗಳ ಮಾರಾಟದ ಹಕ್ಕು ಪಡೆದವರು)

**ಮಾಳಮಡ್ಡಿ ಮತ್ತು ಕಾಮನಕಟ್ಟಿ ಧಾರವಾಡ**

ನಮ್ಮಲ್ಲಿ ಪ್ರತಿ ಒಬ್ಬ ಕನ್ನಡಿಗನಿಗೆ ಬೇಕಾಗುವ ಎಲ್ಲ ಬಗೆಯ ಕನ್ನಡ ಪುಸ್ತಕಗಳು ಒತ್ತಟ್ಟಿಗೆ ದೊರೆಯುವವು. ಎಲ್ಲ ಶಾಲೋಪಯೋಗಿ ಪುಸ್ತಕಗಳೂ ನಕಾಶ ಚಿತ್ರಗಳೂ ಬರವಣಿಗೆಯ ಉಪಕರಣಗಳೂ ಕನ್ನಡ ಕಾಯಿದೆ ಪುಸ್ತಕಗಳೂ ವೈದ್ಯ ಜ್ಯೋತಿಷ್ಯ ಗ್ರಂಥಗಳೂ ದೊರೆಯುವವು. ವ್ಯಾಪಾರಕ್ಕೆ ರಿಯಾಯತಿಯುಂಟು. ನಮ್ಮ ಬೆಲೆಪಟ್ಟಿಗಾಗಿ ೪ ಆಣೆ ಅಂಚೆ ತಿಕೀಟುಗಳನ್ನು ಕಳಿಸತಕ್ಕದ್ದು. ಪುಸ್ತಕ ಬೇಡುವವರು ಅರ್ಧ ಬೆಲೆ ಮುಂಗಡ ಕಳಿಸಿ ಬರೆಯಬೇಕು. ಮಾದರಿಗಾಗಿ ಕೆಲವು ಪುಸ್ತಕಗಳನ್ನು ಕೆಳಗೆ ಕೊಟ್ಟಿದ್ದೇವೆ.

| | | | | |
|---|---|---|---|---|
| ೧ | ಕರ್ನಾಟಕ ಕವಿ ಚರಿತ್ರೆ ಸಂ. ೧, ೨, ೩, | ೧೨ | ೦ | ೦ |
| ೨ | ಕರ್ನಾಟಕ ಸಾಮ್ರಾಜ್ಯ ಸಂ. ೧ ೨, | ೪ | ೮ | ೦ |
| ೩ | ಕಥೆಗಳನ್ನೊಳಗೊಂಡ ಬೀರಬಲ್ಲನ ಚರಿತ್ರೆ | ೧ | ೬ | ೦ |
| ೪ | ಕರ್ನಾಟಕ ಸಿಂಹಾಸನ ಸ್ಥಾಪನೆ | ೧ | ೦ | ೦ |
| ೫ | ಮೊಗಲ್ಬಾದಶಾಹಿ (ಪೂರ್ವಾರ್ಧ) | ೦ | ೧೪ | ೦ |
| ೬ | ಚರಿತ್ರ ಸಂಗ್ರಹ ಭಾಗ ೧ | ೧ | ೪ | ೦ |
| ೭ | ಅಕ್ಬರ ಚಕ್ರವರ್ತಿ ಚರಿತ್ರೆ | ೧ | ೪ | ೦ |
| ೮ | ಮಾಲತೀ-ಮಾಧವ ನಾಟಕ | ೧ | ೦ | ೦ |
| ೯ | ಧರ್ಮಸ್ಥಾಪಕರೂ ಧರ್ಮ ಸುಧಾರಕರೂ | ೦ | ೬ | ೦ |
| ೧೦ | ರಾಸೆಲಾಸ | ೧ | ೦ | ೦ |
| ೧೧ | ಛತ್ರಪತಿ ಶಿವಾಜಿ ಮಹಾರಾಜ | ೨ | ೧೨ | ೦ |
| ೧೨ | ಹಿಂದೀ ಭಾಷಾ ಪ್ರವೇಶದಾಯಿನಿ | ೧ | ೮ | ೦ |
| ೧೩ | ಸ್ಕಂದ ಮಹಾಪುರಾಣ (ಕೇದಾರಖಂಡ) | ೧ | ೮ | ೦ |

**ಶ್ರೀಪಾದ ರಾಮಚಂದ್ರ ದೇಶಪಾಂಡೆ** ಬಿ. ಎಸ್. ಸಿ.

ವ್ಯವಸ್ಥಾಪಕರು

# ಭಾವ-ಪ್ರಭಾತ

ಕತೆಗಾರರು:

**ಹ. ಪೀ. ಜೋಶಿ ಬಿ. ಎ.**

**ಸೋಲ್ ಏಜಂಟ:**

ಸಾಹಿತ್ಯ ಭಾಂಡಾರ

— ಹುಬ್ಬಳ್ಳಿ —

# ಪ್ರೇಮ

(ಪಂಡಿತ ತಾರಾನಾಥರಿಂದ ಸ್ಥಾಪಿತವಾದುದು)

## ಪ್ರತಿ ತಿಂಗಳೂ ಪ್ರಕಟವಾಗುವುದು




**ಸಂಪಾದಕ:**

ಕುಲಕರ್ಣಿ ಶ್ರೀನಿವಾಸ ಬಿ. ಎ.



ಸಂಪುಟ ೧೩ ಫೆಬ್ರುವರಿ ೧೯೩೭ ಸಂಚಿಕೆ ೨

ವಾ. ಚ. ೩||] **ಪ್ರೇಮ ಪ್ರಕಟನಾಲಯ** [ಬಿಡಿಪ್ರತಿ ೪ ಆಣೆ

**ಧಾರವಾಡ**

# ಉದಾರ ಹೃದಯರಲ್ಲಿ ಬಿನ್ನಹ

ಪ್ರೇಮವು ಈ ವರೆಗೆ ಮಾಡುತ್ತ ಬಂದ ಸಾಹಿತ್ಯ ಕಲಾಸೇವೆ ತಮಗೆ ವಿದಿತವೇ ಇದೆ. ಇದೇ ೧೯೩೭ರ ಜನೆವರಿಯಿಂದ ಪ್ರೇಮವು ಮಾಸಿಕ ಗ್ರಂಥ ಪ್ರಕಟನೆಗಳ ರೂಪದಲ್ಲಿ ಪ್ರಸಿದ್ಧವಾಗುತ್ತಲಿದೆ. ಪ್ರತಿ ಪ್ರಕಟನೆಯು ಕ್ರೌ. ೮. ಆಕಾರದ ೧೨೦ ಪುಟಗಾತ್ರವುಳ್ಳದ್ದು. ಅಂಚೆ ವೆಚ್ಚಸೇರಿ ಪ್ರತಿವರ್ಷದ ಹನ್ನೆರಡೂ ಪ್ರಕಟನೆಗಳಿಗೆ ಚಂದಾ **ಮೂರು ರುಪಾಯಿ ಎಂಟಾಣೆ** ಮಾತ್ರ. ನಮ್ಮ ಈ ಸಾಹಸವು ಯಶಸ್ವಿಯಾಗ ಬೇಕಾದರೆ ಸಾಹಿತ್ಯಾಭಿಮಾನಿಗಳು ನಮಗೆ ಉದಾರ ಹೃದಯದಿಂದ ನೆರ ವಾಗಬೇಕು.

**ಸಂಪಾದಕ**

'ಆಪ್ತ ಮಿತ್ರರಿ'ಗೆ--

—ಗ್ರಂಥಕರ್ತ

# ಉದಾರ ಹೃದಯರಲ್ಲಿ ಬಿನ್ನಹ

ಪ್ರೇಮವು ಈ ವರೆಗೆ ಮಾಡುತ್ತ ಬಂದ ಸಾಹಿತ್ಯ ಕಲಾಸೇವೆ ತಮಗೆ ವಿದಿತವೇ ಇದೆ. ಇದೇ ೧೯೩೭ರ ಜನವರಿಯಿಂದ ಪ್ರೇಮವು ಮಾಸಿಕ ಗ್ರಂಥ ಪ್ರಕಟನೆಗಳ ರೂಪದಲ್ಲಿ ಪ್ರಸಿದ್ಧವಾಗುತ್ತಲಿದೆ. ಪ್ರತಿ ಪ್ರಕಟನೆಯು ಕ್ರೌ. ೮. ಆಕಾರದ ೧೨೦ ಪುಟಗಾತ್ರವುಳ್ಳದ್ದು. ಅಂಚೆ ವೆಚ್ಚ ಸೇರಿ ಪ್ರತಿವರ್ಷದ ಹನ್ನೆರಡೂ ಪ್ರಕಟನೆಗಳಿಗೆ ಚಂದಾ **ಮೂರು ರುಪಾಯಿ ಎಂಟಾಣೆ** ಮಾತ್ರ. ನಮ್ಮ ಈ ಸಾಹಸವು ಯಶಸ್ವಿಯಾಗ ಬೇಕಾದರೆ ಸಾಹಿತ್ಯಾಭಿಮಾನಿಗಳು ನಮಗೆ ಉದಾರ ಹೃದಯದಿಂದ ನೆರವಾಗಬೇಕು.

**ಸಂಪಾದಕ**

'ಆಪ್ತ ಮಿತ್ರರಿ'ಗೆ--

—ಗ್ರಂಥಕರ್ತ

# ಪರಿವಿಡಿ

ಮುಂದಿನ ಪ್ರಕಟನೆ

# ಚಂದ್ರನಾಥ

**ಶರಚ್ಚಂದ್ರ ಚಟರ್ಜಿಯವರ ಕಾದಂಬರಿ**

ಅನುವಾದಕರು:

**ಶ್ರೀಮಾನ್ ಗುರುನಾಥ ಜೋಶಿ**

# ಅಪೂರ್ಣ

ಎದುರಿನ ಮನೆಯ ಹೊರಗಿನ ಕೋಣೆ. ಅದು ನನ್ನ ಆಯುಷ್ಯದಲ್ಲಿಯ ಒಂದು ಸೂಕ್ಷ್ಮ ತಂತುವಾಗಿ ನನ್ನನ್ನು ಸುತ್ತಿಕೊಂಡಿದೆ. ಈಗ ನನ್ನ ವಯಸ್ಸು ೬೦ಕ್ಕೆ ಸ್ವಲ್ಪ ಕಡಿಮೆಯಾಗಿರಬೇಕು. ದೃಷ್ಟಿಯೂ ಮಂದವಾಗಿ ನಾಲ್ಕೈದು ವರುಷಗಳಾಗಿರಬಹುದು. ನೆನಪೂ ಅಷ್ಟಕ್ಕಷ್ಟೆ. ಆದರೆ ಒಮ್ಮೊಮ್ಮೆ ಎಲ್ಲವೂ ಒಮ್ಮೆಲೆ ನೆನಪಾಗಿ ಕಣ್ಣೆದುರಿಗೆ ಚಿತ್ರಗಳ ಸಂತೆಯೇ ನೆರೆದಂತಾಗಿ ಎಲ್ಲವೂ ಮಸುಕುಮಸುಕಾಗಿ ಹೋದಂತಾಗುವದು. ಅದೇನು ಹೇಳುತ್ತಿದ್ದೆ,—ಹಂ—ನಮ್ಮ ಕೋಣೆ,—ಅಲ್ಲ, ನಮ್ಮ ಎದುರಿನ ಮನೆಯ ಕೋಣೆ.

ನಾನು ಎಂಟು ವರುಷದಾಕೆ ಇದ್ದಾಗ ಅಲ್ಲಿ ಯಾರೋ ಇಬ್ಬರು ಇರುತ್ತಿದ್ದರು. ಒಂದೆರಡು ದಿನಗಳಲ್ಲಿ ಅವರ ಪರಿಚಯವೂ ನನಗಾಯಿತು. ಒಂದು ದಿನ ಅವರಿಗೆ ಕುಡಿಯಲಿಕ್ಕೆ ನೀರು ಬೇಕಾಗಿತ್ತು. ಅವರು ತಮ್ಮ ಆಳುಮನುಷ್ಯನ ಕಡೆಯಿಂದ ಹೇಳಿಕಳಿಸಿದ್ದರು. ನಾನೆ ಅವರ ಕೋಣೆಯ ವರೆಗೆ ಹೋಗಿ ನೀರು ಕೊಟ್ಟು ಬಂದೆ. ಆ ದಿನ ಅವರು ನನಗೆ ನನ್ನ ಹೆಸರು ಕೇಳಿದರು. ನಾನು ಹಾಗೆ ಓಡಿಬಂದುಬಿಟ್ಟೆ. ಆ ಮೇಲೆ ಎರಡು ದಿನಗಳಾದವು. ನಮ್ಮ ಅಕ್ಕ ಎದುರಿನ ಮನೆಗೆ ಹೋಗಿದ್ದಳು. ನಾನು ಆಕೆಯನ್ನು ಕರೆದುಕೊಂಡು ಬರಬೇಕೆಂದು

ಹೋಗಿದ್ದೆ. ಆಕೆ ಯಾವಾಗಲೂ ಮನೆಗೆ ಹೋಗಿದ್ದಳು. ನಾನೂ ಮನೆಗೆ ಮರಳಿ ಬರುವಾಗ ಸಹಜವಾಗಿ ಕೋಣೆಯಲ್ಲಿ ಯಾರಿದ್ದಾರೆಂದು ನೋಡಿದೆ. ಕೋಣೆಯಲ್ಲಿ ಆ ಇಬ್ಬರಲ್ಲಿ ಒಬ್ಬರೆ ಇದ್ದರು. ಅವರು ನನ್ನನ್ನು ನೋಡಿ ನಕ್ಕರು. ನಾನು ಪುನಃ ಓಡಿ ಮನೆಗೆ ಬಂದೆ. ಆದರೆ ಹೇಗೊ ಏನೊ, ಅದೇ ದಿನ ಸಂಜೆಯೊಳಗಾಗಿ ಆ ಕೋಣೆಯಲ್ಲಿ ಪರಿಚಿತಳಂತೆ ಪ್ರವೇಶಿಸಿದೆ.

ಮರುದಿನದಿಂದ ನಾನು ಆ ಕೋಣೆಯಲ್ಲಿಯೆ ನನ್ನ ವೇಳೆ ಕಳೆಯ ತೊಡಗಿದೆ. ಎರಡು ಹೊತ್ತು ಊಟ, ಶಾಲೆ, ಮಲಗುವದು ಇವುಗಳಿಗಾಗಿ ಅಷ್ಟೆ ಅಲ್ಲಿಂದ ಅಗಲಿರುತ್ತಿದ್ದೆ.... ಅಕ್ಕ ಅತ್ತೆಯ ಮನೆಗೆ ಹೋದಳು. ಮನೆಯಲ್ಲಿ ಕೈಗುಟಿಗೆಗೆ ನಾನೆ ಉಳಿದೆ. ಆದರೂ ಎಲ್ಲರ ಕಣ್ಣುತಪ್ಪಿಸಿ ಆ ಕೋಣೆಗೆ ಹೋಗಿಬರದೆ, ನನ್ನ ಜೀವ ಗಮಿಸುತ್ತಿರಲಿಲ್ಲ.

ನಾಲ್ಕಾರು ವರುಷ ಹೀಗೇ ಹೋದವು. ತಂದೆಯವರು ನಮ್ಮ ಶಾಲೆಯ ಹೆಡ್-ಮಾಸ್ತರರಾಗಿದ್ದರು. ಅವರ ಕಣ್ಣೆದುರಿಗೆ ನನ್ನ ಕಲಿಯುವಿಕೆಯು ವ್ಯವಸ್ಥಿತವಾಗಿ ನಡೆದು, ನಾನು ಮುಲ್ಕಿ (ಸ್ಕೂಲ್ ಫೈನಲ್) ಪರೀಕ್ಷೆಗೆ ಯೋಗ್ಯಳಾದೆ. ಪರೀಕ್ಷೆಯಲ್ಲಿ ನಿಶ್ಚಿತವಾಗಿ ಯಶಸ್ವಿಯಾಗುವೆನೆಂದು ಎಲ್ಲರೂ ಹೇಳುತ್ತಿದ್ದರು. ಆದರೆ ನಾನು ಪರೀಕ್ಷೆಗೆ ಕೂಡಲಿಲ್ಲ....ನನ್ನ ಮದುವೆಯಾಯಿತು. ಪರೀಕ್ಷೆಗೆ ಕೂಡದಿದ್ದುದಕ್ಕಾಗಿ ನನ್ನ ಮನಸಿಗೆ ಕಚ್ಚಿನಿಸಿತು. ಆ ಕೋಣೆಯವರು ಇನ್ನೂ ಅಲ್ಲಿಯೆ ಇರುತ್ತಿದ್ದರು. ಅವರನ್ನು ನೋಡಿದ ಕೂಡಲೆ ನನ್ನ ಮನಸಿಗೆ ನಾಚಿಕೆಯೆನಿಸಿತು. ನಾನು ಪರೀಕ್ಷೆಗೆ ಕೂಡದಿರುವ ಕಾರಣವು ಅವರಿಗೂ ತಿಳಿದದ್ದರಿಂದ ನಾನು ಅವರ ಕಣ್ಣಿಗೆ ಬೀಳದಂತಾದೆ.

ತುಸು ದಿನಗಳಲ್ಲಿ ನನ್ನನ್ನು ಕರೆಯಲಿಕ್ಕೆ ಬಂದರು. ನಾನು ಹೊರಟುಹೋದೆ. ಆ ಮೇಲೆ ಎರಡು ವರುಷ ನಾನು ಬರಲಿಲ್ಲ. ತಿರುಗಿ ತವರುಮನೆಗೆ ಬಂದಾಗ ಆ ಕೋಣೆಯವರು ಬಿಟ್ಟುಹೋಗಿದ್ದರು. ಅಲ್ಲಿ ಯಾರೂ ಇರುತ್ತಿರಲಿಲ್ಲ. ನನಗೆ ಕ್ಷಣಹೊತ್ತು ಹಳವಂಡವೆನಿಸದೆ ಹೋಗಲಿಲ್ಲ. ಮರುಕ್ಷಣವೆ ಆ ಮಾತು ಮರೆತುಬಿಟ್ಟೆ.

ದೈವಗೇಡಿಯಾಗಿ ಎರಡು ಮಕ್ಕಳನ್ನು ಕಟ್ಟಿಕೊಂಡು ನಾನು ತಂದೆಯವರ ಕೊರಳಿಗೆ ಒಂದುಬಿದ್ದೆ. ನನ್ನ ಮಕ್ಕಳು—ನನ್ನ ಮಾರ್ಗದಲ್ಲಿ ಮುಸುಕಿದ ಕತ್ತಲೆಯಲ್ಲಿ ಎಲ್ಲಿಯೊ ಮಿನುಗುವ ಬೆಳಕು—ಛೆ ! ಅದೆಂದಿನ ಮಾತೊ !

ದಿನಾಲು ಸಂಜೆಗೆ ಕಟ್ಟೆಯ ಮೇಲೆ ಕುಳಿತುಕೊಂಡಾಗ ನನ್ನ ದೃಷ್ಟಿ ಆ ಕೋಣೆಯ ಕಡೆಗೆ ಹೋಗುತ್ತಿತ್ತು. ....ನನ್ನ ಬಾಲ್ಯವೆಲ್ಲ ನನಗೆ ಕಣ್ಣೆದುರಿಗೆ ಕಾಣುತ್ತಿತ್ತು. ಆ ಇಬ್ಬರೂ ನನ್ನ ಆಪ್ತರಲ್ಲ. ಏನೊ ನಾಲ್ಕಾರು ವರುಷ ಅಲ್ಲಿ ಇರುತ್ತಿದ್ದರಾದುದರಿಂದ ಪರಿಚಿತರಾಗಿದ್ದರು.... ಈಗ ಅವರ ಸ್ಥಿತಿಗತಿ ಹೇಗಿದ್ದೀತೆಂಬ ವಿಚಾರ ಮನಸಿನಲ್ಲಿ ಬಾರದಿರಲಿಲ್ಲ.... ನನ್ನ ದೈವಗೇಡಿತನದ ಸುದ್ದಿ ಅವರಿಗೆ ಹತ್ತಿದ್ದೀತೆ ಎಂಬುದೊಂದು ವಿಚಾರ....ಅವರಿಗೆ ಹೇಗೆ ತಿಳಿಯಬೇಕು ! ತಿಳಿದರೂ ಅವರ ಮನಸಿಗೇಕೆ ವಿಷಾದವೆನಿಸಬೇಕು !.... ಆದರೂ ಅವರಿಗೆ ವಿಷಾದವೆನಿಸಲಿಕ್ಕಿಲ್ಲವೆಂಬ ವಿಚಾರ ನನ್ನನ್ನು ತೊಂದರೆಗೊಳಿಸಹತ್ತಿತು.

ಈಗ ಆ ಕೋಣೆಯಲ್ಲಿ ಯಾರೂ ಇದ್ದಿಲ್ಲ....ನನ್ನ ಬಾಲ್ಯದ ನೆನಪಾದ ಕೂಡಲೆ ನನ್ನ ದೃಷ್ಟಿ ಆ ಕೋಣೆಯ ಕಡೆಗೆ ಹೋಗುತ್ತಿತ್ತೊ, ಅಥವಾ ನನ್ನ ದೃಷ್ಟಿ ಅತ್ತ ಹೋದ ಕೂಡಲೆ ಬಾಲ್ಯದ ನೆನಪಾಗುತ್ತಿತ್ತೊ ಹೇಳಲಾರೆ.... ಆ ಬರಿಯ ಕೋಣೆಯ ಕಡೆಗೆ ಶೂನ್ಯದೃಷ್ಟಿಯಿಂದ ನೋಡುತ್ತ ಕೂಡುವದೊಂದು ವ್ಯವಸಾಯವಾಯಿತು ನನಗೆ.

ಒಂದು ದಿನ ರಾತ್ರಿಯ ೯ ಗಂಟೆಗೆ ಯಾರೊ ಆ ಕೋಣೆಯ ಬಾಗಿಲ ತೆರೆದರು. ಯಾರೊ ಒಳಗೆ ಹೋಗಿ ದೀಪ ಹಚ್ಚಿದರು. ನಾನು ಹೆದರಿ ಒಳಗೆ ಓಡಿದೆ. ಸತ್ತವನ ಜೀವ ತಿರುಗಿ, ಮೃತದೇಹದಲ್ಲಿ ಪ್ರಾಣ ಸಂಚಾರವಾಗಿದ್ದರೂ ನನಗೆ ಅಷ್ಟು ಅಂಜಿಕೆ ಬರುತ್ತಿದ್ದಿಲ್ಲ. ಆ ರಾತ್ರಿ ನನಗೆ ನಿದ್ದೆಹತ್ತಲಿಲ್ಲ. ಬೆಳಿಗ್ಗೆ ಎದ್ದು ನೋಡಿದಾಗ ಕೋಣೆಗೆ ಕೀಲಿ ಇತ್ತು. ಸುಳ್ಳೆ ಭಾಸವಾಗಿರಬಹುದೆಂದು ಮನಸಿಗೆ ಸಮಾಧಾನ ಮಾಡಿಕೊಂಡೆ.

ನನಗೆ ಭಾಸವಾಗಿದ್ದಿಲ್ಲ. ಆ ಕೋಣೆಗೆ ಯಾರೊ ಇರಲಿಕ್ಕೆ ಬಂದದ್ದು ನಿಜ. ಹಿಂದಕ್ಕೆ ಇದ್ದ ಆ ಇಬ್ಬರಲ್ಲ. ಯಾರೊ ಒಬ್ಬರು.

ನಾನು ಕಟ್ಟೆಯ ಮೇಲೆ ಕೂಡುವದನ್ನು ಬಿಟ್ಟುಬಿಟ್ಟೆ. ಆ ಕೋಣೆಯು ದೂರವಾದಂತೆನಿಸಿತು. ಅಲ್ಲಿ ಮೊದಲಿನವರೆ ಬಂದಿದ್ದರೆ ಅವರಿಗೆ ಈ ಸುಟ್ಟ ಮೋರೆಯನ್ನು ಹೇಗೆ ತೋರಿಸಲೆಂಬುದೊಂದು ಸಂಕಟ. ಯಾರೂ ಇಲ್ಲದಾಗ ಆ ಕೋಣೆಯು ಕಳೆಯಿಲ್ಲದಂತಿತ್ತು. ಈಗ ಅಲ್ಲಿ ಜೀವದ ಸುಳಿವು ಆಡಿದರೆ,—ನನಗೇಕೆ ವಿಷಾದವೆನಿಸಬೇಕೊ!

ಕೋಣೆಗೆ ಬಂದವರ ದೃಷ್ಟಿಗೆ ನಾನು ಬೀಳದಿದ್ದರೂ ಅವರು ಯಾರು ಎಂಬ ಕುತೂಹಲವು ಮಾತ್ರ ಹೆಚ್ಚುತ್ತ ನಡೆಯಿತು. ಎಂಟು ದಿನಗಳಾದರೂ ನನ್ನ ಇಚ್ಛೆ ಸಫಲವಾಗಲಿಲ್ಲ. ಒಂದು ನಸುಕಿನಲ್ಲಿ ನಮ್ಮ ಮನೆಯ ಬಾಗಿಲ ತೆರೆದೆ. ಆ ಕೋಣೆಯಿಂದ ಯಾರೊ ಹೊರ ಬಿದ್ದರು. ಚೆನ್ನಾಗಿ ನೋಡಿಕೊಂಡೆ. ಮೊದಲಿನವರಲ್ಲ— ಆದರೂ ಮೋರೆ ಪರಿಚಯುದ್ದು. ಎಲ್ಲಿ ನೋಡಿರಬಹುದೆಂಬ ಸಂದೇಹ.

ಆ ದಿನ ಯೋಚಿಸಿಯೆ ಯೋಚಿಸಿದೆ. ಕೊನೆಗೆ ನೆನಪಾಯಿತು. ನನ್ನ ಮದುವೆಗೆ ಆ ಪಕ್ಷದಿಂದ ಬಂದ ಒಬ್ಬ ಹದಿನಾರು ಹದಿನೇಳು ವರುಷದ ಹುಡುಗನನ್ನು ನಾನು ಎಷ್ಟೊ ದಿನ ನೆನಪಿನಲ್ಲಿಟ್ಟಿದ್ದೆ. ಆತನ ಮೋರೆಯ ಮೇಲೆ ಹುಡುಗತನದ ಕಳೆಯಿದ್ದಿಲ್ಲ. ಯಾರ ಕಡೆಯಿಂದಲೊ ಉಡುಗೊರೆಯನ್ನು ಮುಟ್ಟಿಸುವಾಗ ಗಂಡನರಿಗೆ ಆತನು ಉಡುಗೊರೆಯನ್ನು ಕೊಟ್ಟನು. ನಮ್ಮಿಬ್ಬರ ತಲೆಯ ಮೇಲೆ ಮಂಗಲಾಕ್ಷತೆಗಳನ್ನು ಹಾಕಿ ಕುಂಕುಮ ಹಚ್ಚಿದನು. ನನಗೆ ಕುಂಕುಮ ಹಚ್ಚುವಾಗ ನಾನು ಆತನ ಕಡೆಗೆ ನೋಡಿದೆ. ಆತನ ಮೈಯೆಲ್ಲ ನಡುಗುತ್ತಿತ್ತು. ಆತನು ನನ್ನ ಕಡೆಗೆ ನಿಶ್ಚಲ ದೃಷ್ಟಿಯಿಂದ ನೋಡುತ್ತಿದ್ದ. ನಾನು ತತ್‌ಕ್ಷಣ ತಲೆ ತಗ್ಗಿಸಿದೆ. ಈಗ ಅದೆ ದೃಷ್ಟಿ,—ಅದೆ ನೋಟ ಗುರುತು ಕೊಟ್ಟಿತು. ನಾನು ಹಾಗೇ ಹಿಂದೆ ಸರಿದುಬಿಟ್ಟೆ. ಆತನಿಗೆ ನನ್ನ ಗುರುತು ಸಿಕ್ಕಂತೆ ತೋರಲಿಲ್ಲ.... ಆತನು ನಮ್ಮ ಮನೆಯ ಹತ್ತಿರವೆ ಇರಲಿಕ್ಕೆ ಬಂದದ್ದು ಕೇವಲ ಯೋಗಾಯೋಗವಿರಬಹುದೆಂದು ಮಾತ್ರ ನಾನು ನಂಬದಾದೆ.... ಹಾಗಿದ್ದರೆ ಆತನ ಉದ್ದೇಶ?....ಮನಸು ಹೇಸಿತು. ಒಂದು ಮಾತ್ರ ನಿಶ್ಚಯ ಮಾಡಿದೆ....ನನ್ನ ತಿರಸ್ಕಾರವನ್ನು ಆತನಿಗೆ ಗೊತ್ತಾಗುವಂತೆ

ಮಾಡಬೇಕು. . ಕಾರಣವಿಲ್ಲದೆ ಗಾಳಿಗೋಪುರವನ್ನು ಕಟ್ಟಿದರೆ ಬರುವದೇನು ಎಂದುಕೊಂಡು ನಾನು ಸಮಾಧಾನ ಮಾಡಿಕೊಂಡೆ.

ಆತನಿಗೆ ತಿಳಿಯದೆ ನಾನು ಸೂಕ್ಷ್ಮವಾಗಿ ಆತನ ನಡೆ-ನುಡಿಯ ಕಡೆಗೆ ಲಕ್ಷ್ಯವಿಟ್ಟೆ. ಆತನ ಉದ್ಯೋಗವೇನಿತ್ತೋ ನನಗೆ ತಿಳಿಯಲಿಲ್ಲ. ಆತನು ಬಹುಶಃ ಕೋಣೆಯಲ್ಲಿ ಇರುತ್ತಿದ್ದೇ ಇಲ್ಲ. ಇದ್ದಾಗಲೂ ಆತನ ಸುಳುವು ಇರುತ್ತಿದ್ದಿಲ್ಲ.

ಬರಬರುತ್ತ ಇದೊಂದು ಹೊಸ ಉದ್ಯೋಗ ನನಗೆ ಹತ್ತಿತ್ತು. ನಾನು ವಿಧವೆ. ಸಂಸಾರದ ಸುಖಗಳನ್ನೆಲ್ಲ ಉಂಡವಳು. ಎರಡು ಮಕ್ಕಳ ತಾಯಿ.... ನನ್ನ ಕೈಹಿಡಿದವರನ್ನು....ಅವರ ಹೆಸರು ಕೆಡಿಸುವದೆ!....

ನಾನು ಸೂಕ್ಷ್ಮವಾಗಿ ಆತನ ಕಡೆಗೆ ನೋಡಹತ್ತಿದೆ.... ನನ್ನ ಮನಸು ಚಂಚಲವಾಯಿತು........ನಾನು ತಿಳಿವಳಿಕೆಯಿಲ್ಲದ ಬಾಲವಿಧವೆಯಲ್ಲ.... ಅಂಥವಳಿಗೆ ಏನೊ ಮದುವೆಯೆನ್ನುವಷ್ಟರಲ್ಲಿಯೆ ವೈಧವ್ಯದ ಧಗೆಯಲ್ಲಿ ಬೀಳಬೇಕಾಗುತ್ತದೆ.... ನಾನು ನಾಲ್ಕು ದಿನ ಸಂಸಾರ ಮಾಡಿದ್ದೆ....ಎರಡು ಮಕ್ಕಳ ತಾಯಿ....ಮನಸು ಬಿಗಿಹಿಡಿದೆ....ಇನ್ನು ಶ್ಯಾಮ ರಾಮ ಇವರಿಬ್ಬರೆ ನನಗೆ ಗತಿ....ಅವರನ್ನು ಬೆಳೆಸಿ ದೊಡ್ಡವರನ್ನಾಗಿ ಮಾಡಬೇಕು...ಶ್ಯಾಮ ರಾಮ....ಜಯ ವಿಜಯರಂತೆ ಹುಟ್ಟಿದ್ದರು....ಹಾಗೇ ಬೆಳೆಯಲಿ....ಆಯಿತು. ನಾನು ಅವರ ಜೀತದ ಆಳಾಗಿ ದುಡಿಯುತ್ತಿದೆ. ಇಬ್ಬರೂ ಹಟಮಾರಿಗಳು. ನನ್ನನ್ನು ಕಾಡಿಸುತ್ತಿದ್ದರು. ಅವರಾದರೂ ಏನು ಮಾಡಿಯಾರು! ನಾನು ಅವರನ್ನು ಹಡೆದವರ ಕೈಹಿಡಿದಿದ್ದೆ!....ಬೇಸತ್ತೆ...ನನ್ನ ಕೈಹಿಡಿದವರೇನು ಅಷ್ಟು ಕಾಡಿಸುತ್ತಿದ್ದಿಲ್ಲ.

ಒಂದು ದಿನ ಶ್ಯಾಮ ರಾಮ ಮನೆಯಲ್ಲಿ ಕಾಣಲಿಲ್ಲ. ಹೊರಗೆ ಬಂದು ನೋಡುತ್ತೇನೆ, ಅವರಿಬ್ಬರೂ ಆ ಕೋಣೆಯಲ್ಲಿ ಕುಳಿತು ಹರಟೆ ನಡೆಸಿದ್ದರು. ನನಗೆ ಸಿಟ್ಟು ಬಂತು. ಮೆಲ್ಲನೆ ಹೋಗಿ ಹಣಿಕಿಹಾಕಿದೆ. ಕಾಫಿ ಕುಡಿಯತೊಡಗಿದ್ದರು ತಿರುಕರ ಹುಡುಗರು!—ಮರಳಿ ಬಂದು ಬಿಟ್ಟೆ.

ಶ್ಯಾಮ ರಾವ ನನ್ನ ಕೈಗೆ ಹತ್ತದಾದರು. ನನ್ನನ್ನು ಕಾಡಿಸುವುದು ತಪ್ಪಿತು. ನನ್ನ ಮೊದಲಿನ ಚಂಚಲತೆಗೆ ಪ್ರಾರಂಭವಾಯಿತು. ಧರ್ಮದ ಕಡೆಗೆ ಲಕ್ಷ್ಯ ಕೊಡಬೇಕೆಂದು ಮಾಡಿದೆ....ಮೊದಲು ಹಾಗೆ ಆಗಬೇಕು:... ಶ್ಯಾಮ ರಾವ ಎದೆ ಒಡಕೊಂಡರೆ! ಮನಸು ಗಟ್ಟಿ ಮಾಡಿಕೊಂಡೆ....ಹಾಗೆ ಆಗಬಾರದು. ಪೋದ್ದೋರಿಕೆಯು ಧರ್ಮ ನನಗೇಕೆ ಬೇಕು ! ಮನಸೊಂದು ಸ್ವಚ್ಛವಿದ್ದರೆ ತೀರಿತು. ನಾನು ಪುರಾಣ ಪುಣ್ಯಕಥೆಯನ್ನೆಲ್ಲ ಬಿಟ್ಟು ನನ್ನ ಕೈಹಿಡಿದವರ ಛಾಯಾಚಿತ್ರವನ್ನು ತೆಗೆದುಕೊಂಡು ಅವರ ಪೂಜೆಯಲ್ಲಿ ಮಗ್ನಳಾದೆ. ಮನಸು ಶಾಂತವಾಯಿತು.... ಒಂದು ರಾತ್ರಿ ಕನಸು ಬಿತ್ತು. ದಟ್ಟಡವಿಯಲ್ಲಿ ಹಾದಿ ತಪ್ಪಿ ನಡೆದಿದ್ದೆ. ಅಷ್ಟರಲ್ಲಿ ಅವರು ಬಂದು ನನ್ನ ಕೈಹಿಡಿದು ನನಗೆ ಮಾರ್ಗ ತೋರಿಸಹತ್ತಿದರು. ನಾನು ಎಚ್ಚತ್ತು ನೋಡಿದಾಗ ಬೆಳಗಾಗಿತ್ತು. ನನ್ನ ಕಣ್ಣುಗಳೆರಡೂ ತೊಯ್ದು ತಪ್ಪಡಿಯಾಗಿದ್ದವು. ಶ್ಯಾಮ ರಾವ ಮಲಕೊಂಡಿದ್ದರು. ಅವರನ್ನು ಮುತ್ತಿಟ್ಟು ಮೆಲ್ಲನೆ ಎದ್ದು ಒಳಗೆ ಹೋದೆ. ನನ್ನಲ್ಲಿ ಒಂದು ಹುರುಪು ಹುಟ್ಟಿತ್ತು. ಆ ದಿನ ಮೊದಲು ದೇವರಿಗೆ ನಮಸ್ಕಾರ ಮಾಡಿದೆ. ಒಂದು ಪರಿಮಳವು ಮುಸುಕಿದಂತಾಯಿತು.

ಒಂದು ದಿನ ಆ ಕೋಣೆಯಿಂದ ಹೆಂಗಸರ ಧ್ವನಿ ಕೇಳಬಂತು. ಚಕಿತಳಾದೆ. ಮನಸು ಮತ್ತೆ ಚಂಚಲವಾಯಿತು. ಯಾರಿರಬಹುದೆಂಬ ಕುತೂಹಲ....ಅವರು ಹೊರಗೆ ಬಂದರು. ಆಕೆ ಒಬ್ಬ ಪ್ರಾಯದ ಹುಡಿಗೆ. ಆ ಸಲಿಗೆ ಗಂಡಹೆಂಡಿರದಲ್ಲ....ನಾನು ಸ್ವಸ್ಥಳಾದೆ. ಅದೇಕೆ—ಆತನ ಮದುವೆಯಾಗಿತ್ತೋ? ಇನ್ನೂ ಆಗಿರಲಿಕ್ಕಿಲ್ಲ....ಆಕೆ ತಂಗಿಯೆ ಇರಬಹುದು....ಮುಂದೆ ಅವರನ್ನೆ ನೋಡತೊಡಗಿದೆ....ಆಕೆ ಊರು ನೋಡಲಿಕ್ಕೆ ಬಂದವಳು....ಊಟಕ್ಕೆ ಅಷ್ಟು ಕೋಣೆಯಲ್ಲಿರುತ್ತಿದ್ದರು.

ಒಂದು ದಿನ ಆಕೆಯೊಬ್ಬಳೆ ಕೋಣೆಯ ಬಾಗಿಲಲ್ಲಿ ಕುಳಿತಿದ್ದಳು. ನಾನು ಆ ದಿನ ಆಕೆಯನ್ನು ಚೆನ್ನಾಗಿ ನೋಡಿದೆ. ಹುಡಿಗೆ ಒಳ್ಳೆಯ ಚೆಲುವೆ. ತಂಗಿಯೆ ಇದ್ದಿರಬೇಕು....ಆಕೆ ನನ್ನನ್ನು ನೋಡಿ ಎದ್ದು ಬಂದಳು....ನಮ್ಮ ಕಟ್ಟೆಯ ಮೇಲೆಯೆ ಮಾತಾಡುತ್ತ ಕುಳಿತೆವು. ಆ

ಮಾತಿನ ಕಡೆಗೆ ನನ್ನ ಲಕ್ಷ್ಯವೆ ಇರಲಿಲ್ಲ....ಕೇಳಬೇಕು ಆಕೆಯನ್ನೆ,— ಇದೇ ವಿಚಾರ. ಕೇಳಿದೆ. ಆಕೆ ಮಾತಾಡದೆ ನಕ್ಕಳು!....ನನಗೇ ತಿಳಿಯ ಬಾರದೆ? ಆ ಎರಡು ದಿನ ನನಗೆ ನಿದ್ದೆ ಹತ್ತಲಿಲ್ಲ. ಕಣ್ಣುಗಳು ತೊಯ್ದು ಹೋಗುತ್ತಿದ್ದವು.

ಮುಂದೆ ನಾಲ್ಕೈದು ದಿನ ಅವರಿಬ್ಬರನ್ನೂ ಕಾಣಲಿಲ್ಲ. ಒಂದೆರಡು ಸಲ ಆಕೆಯನ್ನು ಕಂಡಂತಾಯಿತು. ಏನೊ ಗಡಿಬಿಡಿಯಲ್ಲಿದ್ದಳೊ ಏನೊ....ಅದೆ ರಾತ್ರಿ ಆತನ ತಂದೆ ಬಂದರು. ಕೋಣೆಯಲ್ಲಿ ಏನೊ ಭಯಂಕರ ..ನಾನು ಆ ವಿಚಾರವನ್ನೆ ಮನಸಿನಲ್ಲಿ ಬರಗೊಡಲಿಲ್ಲ. ದೇವರಿಗೆ ಮಾತ್ರ ಬೇಡಿಕೊಂಡೆ.

ನಸುಕಿನಲ್ಲಿ ಒಂದು ಆರ್ತಧ್ವನಿಯಾಯಿತು. ನನಗೆ ಹೌಹಾರಿದಂತಾಯಿತು. ಅಂತೂ ದೇವರು ಕಿಡಿಗೇಡಿ. ನಾನೂ ಅಳುತ್ತ ಕುಳಿತೆ, ಕಣ್ಣಲ್ಲಿ ನೀರಿರಲಿಲ್ಲ.

ಆ ದಿನ ಮಧ್ಯಾಹ್ನಕ್ಕೆ ಆತನ ತಂದೆ ಆಕೆಯನ್ನು ಕರಕೊಂಡು ಹೋದರು. ಆಕೆಯ ಮೋರೆಯ ಕಡೆಗೆ ನನ್ನಿಂದ ನೋಡುವದೇ ಆಗಲಿಲ್ಲ.. ಆಕೆಯೂ ನನ್ನಂತೆ ವಿಧವೆ...ನನಗೆ ಎರಡು ಮಕ್ಕಳಾದರೂ ಇರುತ್ತವೆ. ಆಕೆ.. ಆಕೆಗೆ ಮಂಗಳವಿತ್ತೊ ಏನೊ!

ನಾನು ಪರಿಪೂರ್ಣಳಲ್ಲ. ಈಗಲೂ ನನ್ನ ಕೈಹಿಡಿದವರ ಛಾಯಾ ಚಿತ್ರವನ್ನು ಪೂಜಿಸುತ್ತೇನೆ....ಆತನು ಮಾತ್ರ ಇನ್ನೂ ಕಣ್ಣೆದುರಿಗೆ ಕಟ್ಟಿದಂತಿದೆ. ಆಯುಷ್ಯವಂತೂ ಮುಗಿಯುತ್ತ ಬಂದಿರುವದು. ಏನೊ, ಕಾಲು ಹಾಕುವದು. ಆತನ ಬೆಟ್ಟಿಯ ಆಶೆ...ಇಲ್ಲ, ನನ್ನ ಕೈಹಿಡಿದವರು ಅಲ್ಲಿ ನನ್ನ ದಾರಿ ಕಾಯುತ್ತಿರುವರು.

# ಕುಸುಮಾ

ಕುಸುಮೆಯನ್ನು 'ಚಂಡಿ' ಎಂದು ಕರೆಯುವವರು ದುಷ್ಟತನದಿಂದಲೆ ಹಾಗೆ ಕರೆಯುತ್ತಿರಬೇಕು. ಆಕೆಯು ಓಣಿಯಲ್ಲಿಯ ಚಿಕ್ಕವರ ದೊಡ್ಡವರ ಮೇಲೆ ತನ್ನ ವರ್ಚಸ್ಸನ್ನಿಟ್ಟುಕೊಂಡದ್ದನ್ನು ಕಂಡು ಮತ್ಸರವೆನಿಸಿ ಅವರು ಹೀಗೆನ್ನುವ ಪರಿಪಾಠ ಬಿದ್ದಿರಬೇಕು. ಆಕೆಯ ಅಜ್ಜ ಉಮಾಪತಿಭಟ್ಟರು ಆಕೆಯನ್ನು 'ಸುಮ್ಮಿ'ಎಂದು ಕರೆಯುವದು, ಅದು 'ಕುಸುಮೆ' ಎಂಬುದರ ಲಘುರೂಪವೆಂದು 'ಲಘುಪರಿಭಾಷೇಂದು 'ಶೇಖರ'ದಲ್ಲಿ ನೋಡಿ ನಿರ್ಧರಿಸಬೇಕು. ಅಥವಾ 'ಸುಮ್ಮಿ' ಎಂಬುದು 'ಗುಮ್ಮಿ' ಎಂಬುದರ ಪ್ರಾಸಪದ (!)ವೆಂಬುದು 'ಛಂದಃಶಾಸ್ತ್ರ' ಬಲ್ಲವರಿಗೆ ಗೊತ್ತಾದ ಮಾತು. ಇನ್ನೂ ವಿಚಾರ ಮಾಡಿದರೆ, ವೈದ್ಯಕ, ಗಣಿತ, ಜ್ಯೋತಿಷ, ಪದಾರ್ಥವಿಜ್ಞಾನ, ಮುಂತಾದ ಅನೇಕ ಶಾಸ್ತ್ರಗಳ ಆಧಾರದಿಂದಲೂ ಆ ಹೆಸರನ್ನು ಸಿದ್ಧಮಾಡಬಹುದು. ಹೆಸರಿನ ವಿಷಯವು ಇಷ್ಟು ಸುಸೂತ್ರವಾಗಿ ಕೊನೆಗಂಡರೂ 'ಸುಮ್ಮಿ'ಯದು ಮಾತ್ರ ಅಷ್ಟು ಸುಸೂತ್ರವಾದ ಜೀವನವಿದ್ದಿಲ್ಲ. ಉಮಾಪತಿಭಟ್ಟರ ಜೀವನದಲ್ಲೊಂದು ತೊಡಕು.

ಒಬ್ಬನೆ ಒಬ್ಬ ಮಗ ಗಣೇಶ ಮತ್ತು ಸೊಸೆ, ತುಸು ದಿನಗಳ ಅಂತರದಿಂದ ತೀರಿದ ನಂತರ ತಾಯಿಯ ಕೈಯಿಂದ ಕಳಚಿ ಬಿದ್ದ ವರ

ದೇಶಿಯಾದ 'ಸುಮ್ಮಿ'ಯು ಭಟ್ಟರ ಉಡಿಯಲ್ಲಿ ಬಿದ್ದಳೆಂದು ಹೇಳುವ ಕಾರಣವಲ್ಲ. ಭಟ್ಟರ ಕುಟುಂಬ ತೀರಿಕೊಂಡಾಗ ಗಣೇಶ ಎರಡು ತಿಂಗಳ ಕೂಸು. ಅದೆ ಕೂಸನ್ನು ಎತ್ತಿ ಬೆಳೆಯಿಸಿ ದೊಡ್ಡದನ್ನಾಗಿ ಮಾಡಿ ವಿದ್ಯೆ ಕಲಿಸಿ ಸೊಸೆಯನ್ನು ಮನೆಗೆ ತಂದು ಹೀಗೆ ಹುಶ್ ಎಂದು ಕೂಡುವಷ್ಟ ರಲ್ಲಿಯೆ ಬಡಿಗಲ್ಲು ಬಂದು ಬಡಿಯಿತು. ಪುನಶ್ಚ ಅದೆ ಮಂತ್ರದ ಪುರಶ್ಚರಣೆ. ಗಂಡುಮಕ್ಕಳನ್ನು ಸಾಕುವದು ಸುಲಭ. ಶಾಲೆಯ ಸೆಳವಿಗೆ ಒಮ್ಮೆ ಬಿದ್ದುವೆಂದರೆ ಕೈಗೇ ಹತ್ತುವದಿಲ್ಲ. ಹೆಣ್ಣುಮಕ್ಕಳ ಮಾತು ಬೇರೆ. ಭಟ್ಟರು ಜಮದಗ್ನಿಯ ಕುಲದವರು. ಆದರೆ ಇದು ಒಮ್ಮೆ ಗಾಯ ತಾಗಿದಲ್ಲಾದ ಇನ್ನೊಂದು ಗಾಯು. ಅಂತೂ ಸುಮ್ಮಿಯನ್ನು ಸಾಕಿ ಸಲಹುವ ಭಾರವು ಪ್ಮೈಮೇಲಂತೂ ಬಿದ್ದಿತು. ಹಗಲಿರುಳು ಅದೇ ವಿಚಾರ.

ಸುಮ್ಮಿಯು ಈಗ ೯–೧೦ ವರ್ಷದವಳಾಗಿದ್ದಳು. ಹುಟ್ಟುವಾಗ ಹಟಮಾರಿತನದ ಹರಿವಾಣವನ್ನೆ ಹೊತ್ತುಕೊಂಡು ಬಂದಿದ್ದಳೊ ಏನೊ. ಇಡಿ ಜಗತ್ತಿಗೆ ಬುದ್ಧಿ ಕಲಿಸುವ ಭಟ್ಟರು ಅವಳು ದನಿ ತೆಗೆದಳೆಂದರೆ ಹೌಹಾರಿದಂತಾಗಿದ್ದರು. ಅವಳು ರಾಮನಂತೆ ಚಂದಪ್ಪನನ್ನು ಬೇಡುತ್ತಿದ್ದಿಲ್ಲ. ಅಷ್ಟೆ, ಒಮ್ಮೊಮ್ಮೆ ೨-೩ ಗಂಟೆಗೆ 'ಪೆಪ್ಪರಮಿಂಟು' ಇಲ್ಲವೆ ಕಿತ್ತಳೆ ಹಣ್ಣು. ಭಟ್ಟರು ಅದಷ್ಟು ತಮ್ಮ ಸಿದ್ಧತೆಯಲ್ಲಿ ಇದ್ದೆ ಇರುತ್ತಿದ್ದರು. ತಲೆಗಿಂಬಿಗೆ ಅವಳು ಬೇಡಬಹುದಾದ ಪ್ರತಿಯೊಂದನ್ನೂ ಇಟ್ಟು ಕೊಂಡು ಮಲಕೊಳ್ಳುತ್ತಿದ್ದರು. ಒಂದೊಂದು ದಿನ ಯೋಗಾಯೋಗವೆ ಹಾಗೆ ಒದಗಿ ಬರುತ್ತಿತ್ತು. ಆ ದಿನ ಅದಾವದೂ ಬೇಕಾಗದೆ ಅವಳಿಗೇ ತಿಳಿಯದಾದ ಯಾವದೊ ಏನೊ ಬೇಕಾಗಿ ಹಟಮಾಡಬೇಕೆಂದೆನಿಸುತ್ತಿತ್ತು. ಭಟ್ಟರಿಗೆ ಕಣ್ಣುತುಂಬ ನಿದ್ರೆ, ಹೊಟ್ಟೆತುಂಬ ಊಟ ಸಿಕ್ಕೀತೆಂಬ ಮಾತು ಸುಳ್ಳು.

ಹಾಗೂ ಹೀಗೂ ಮಾಡಿ ಸುಮ್ಮಕ್ಕನ ಸುಖದಲ್ಲಿ ಸಮಾಧಾನ ಹೊಂದಿ ದಿನ ಕಳೆಯಬೇಕೆಂದರೆ ಮತ್ತೊಂದು ಪಾಪಿ ಪರದೇಶಿ ಅವರ ಪಾಲಿಗೆ ಬಂದು ಬೀಳಬೇಕೆ! ಅವರ ಅಕ್ಕನ ಮೊಮ್ಮಗ–ಮಗಳ ಮಗ–

ಶ್ರೀನಿವಾಸ, ತಂದೆ-ತಾಯಿಗಳನ್ನಿಬ್ಬರನ್ನೂ ಕಳಕೊಂಡು ನಡುನೀರಿನಲ್ಲಿ ನಿಂತುಬಿಟ್ಟಿದ್ದ. ಆಯಿತು. ಇದೂ ಒಂದು ಜೀವವು ಅವರ ಕೊರಳಿಗೆ ಸುತ್ತಿಕೊಂಡಿತು. ಎರಡೂ ಪರದೇಶಿ ಹುಡುಗರನ್ನಿಟ್ಟುಕೊಂಡು ದಿನ ಹಾಕುತ್ತಿದ್ದರು.

೨

ಆ ದಿನ ಶ್ರೀನಿವಾಸ ತನ್ನ ನಿತ್ಯದ ಓದಿನಲ್ಲಿ ತೊಡಗಿದ್ದ. ಹತ್ತಿರ ಸುಮ್ಮಿಯು ಒಂದು ಕತ್ತರಿಯನ್ನು ತೆಗೆದುಕೊಂಡು ಕೈಗೆ ಸಿಕ್ಕ ಕಾಗದ ವನ್ನು ಚೂರುಚೂರಾಗಿ ಮಾಡತೊಡಗಿದ್ದಳು.

" ಶೀನಣ್ಣಾ—"

ಶ್ರೀನಿವಾಸ ಹಾಗೆ ಓದುತ್ತ ಕುಳಿತ.

" ಏ–ಶೀನಣ್ಣಾ—"

ಉತ್ತರ ಸಿಗಲಿಲ್ಲ. ಸುಮ್ಮಕ್ಕ ಆತನ ಲಕ್ಷ್ಯ ತನ್ನ ಕಡೆಗೆ ಸೆಳೆದು ಕೊಳ್ಳಬೇಕೆಂದು ಕತ್ತರಿಯಿಂದ 'ಚಕ್ ಚಕ್' ಮಾಡಿದಳು. ಇನ್ನು ಇಲ್ಲಿಂದ ಏಳುವುದೆ ಒಳ್ಳೆಯದೆಂದು ಆತನು ಸ್ಥಲವನ್ನೆ ಬಿಟ್ಟುಹೊರಟನು.

ಸುಮ್ಮಕ್ಕನಿಗೆ ಸಿಟ್ಟುಬಂತು. ಅವಳು ಸುತ್ತಲೂ ನೋಡಿದಳು. ಶ್ರೀನಿವಾಸನು ತನ್ನದೊಂದು ಹೊಸ ಪುಸ್ತಕವನ್ನು ಅಲ್ಲಿಯೆ ಬಿಟ್ಟು ಹೋಗಿದ್ದನು. ಅದನ್ನು ತೆಗೆದುಕೊಂಡು ಅದರ ಕೆಲವು ಪುಟಗಳನ್ನು ಕತ್ತರಿಯ ಬಾಯಿಗೆ ಕೊಟ್ಟಳು.

" ನೋಽಡು—" ಅವಳ ಮೋರೆಯ ಮೇಲೆ ಗೆಲವಿನ ನಗೆ ಮೂಡಿತು. ಶ್ರೀನಿವಾಸ ನೋಡಿದ.

" ಏ × × ಇಡದನ್ನ—" ಸುಮ್ಮಿಯ ಕಿವಿಗಳು ಮಂದವಾಗಿ ದ್ದವೊ ಏನೊ—ಅವಳು ಸಹಜವಾಗಿ ಕತ್ತರಿಯ ಕೈ ಗಟ್ಟಿಯಾಗಿ ಮುಚ್ಚಿ ದಳು. ಪುಟಗಳು ತುಂಡಾಗಿ ಬಿದ್ದವು. ಶ್ರೀನಿವಾಸ ಹಾಗೆ ಓಡಿ ಬಂದ.

" ಏ × × ಬಂಡೆ ನಿಂದ್ರು—" ನಾಲ್ಕು ಏಟು ಹೊಡಕೊಂಡ. ಆತನು ಹತ್ತಿರ ಬರುವ ಮೊದಲೆ ಸುಮ್ಮಕ್ಕನ ದನಿ ಏರಿತ್ತು.

"ಅಜ್ಜಾ, ನೋಡು ಹೊಡೀತಾನ—" ಆ ಆರ್ತಧ್ವನಿಯನ್ನು ಕೇಳಿ ಓಡಿ ಬರದವನು ಕಟುಕನೆ ಇರಬೇಕು. ಭಟ್ಟರು ತಮ್ಮ ಪೂಜೆಯ ಸಾಹಿತ್ಯ ಮಾಡುವದರಲ್ಲಿ ತೊಡಗಿದ್ದರು. ಸುಮ್ಮಕ್ಕನ ದನಿ ಕೇಳಬಂದ ಕೂಡಲೆ ಅವರು ಹೊರಗೆ ಬಂದುಬಿಟ್ಟರು.

"× × × ಹುಡಿಗಿನ್ನ ಕೊಲ್ಲಬೇಕಂತ ಮಾಡಿಯೊ ಏನು ಮತ್ತಽ—"

ಭಟ್ಟರ ಸಿಟ್ಟು ತಲೆಗೆ ಏರಿ ಶ್ರೀನಿವಾಸನ ಮೇಲೆ ಏಟುಗಳ ಸುರಿಮಳೆಗೆ ಪ್ರಾರಂಭವಾಯಿತು. ಆತನು "ಇಲ್ಲೊ ಅಜ್ಜಾ — ಆಕೀನಽ ನನ್ನ ಪುಸ್ತಕಾ ಹರದ್ಲೊ–" ಎಂದು ಕೂಗಿಯೇ ಕೂಗಿಕೊಂಡ. ಕೇಳುವವರಾರು! ಭಟ್ಟರ ಆ ರುದ್ರಾವತಾರವನ್ನು ನೋಡಿ ಸುಮ್ಮಕ್ಕನೂ ನಡುಗಿದಳು. ಶ್ರೀನಿವಾಸ ಆ ಏಟಿನ ಪೆಟ್ಟು ತಾಳಲಾರದೆ ಒದ್ದಾಡುವದನ್ನು ನೋಡಿ ಅವಳಿಗೆ ಪಶ್ಚಾತ್ತಾಪವೆನಿಸಹತ್ತಿತು.

"ಒಳಗೆ ಕೂಳಿಗಾರಽ ಬಾ – ಕಾಲ ಮುರದ ಕಳಸ್ತೇನಿ" ಎಂದು ಅಂಜಿಸಿಬಿಟ್ಟರು! ಒಳಗೆ ನಡೆದರು. ಅವರು ಮರೆಯಾದ ಕೂಡಲೆ ಶ್ರೀನಿವಾಸ ತನ್ನ ಎಲ್ಲ ಕಸುವು ಒಟ್ಟುಗೂಡಿಸಿ ಒಂದು ಬಿಗಿದ. ಸುಮ್ಮಕ್ಕನ ಕಣ್ಣಿಗೆ ಕತ್ತಲು ಕಂಡಿತು. ಆದರೂ ಅವಳು ಪಿಟ್ ಎಂದು ಮಾತಾಡಲಿಲ್ಲ.

ಆ ದಿನದ ಊಟದ ಕಾಲಕ್ಕೆ ಕೇವಲ ಧರ್ಮರಾಜ್ಯ. ಮಾತೇ ಇಲ್ಲದ ಮೇಲೆ ಕಲಿ ಪ್ರವೇಶಕ್ಕೆ ಆಸ್ಪದವೆಲ್ಲಿಯದು! ಶ್ರೀನಿವಾಸ ತಲೆ ತಗ್ಗಿಸಿ ನಾಲ್ಕು ತುತ್ತು ಉಂಡು ಎದ್ದ. ಸುಮ್ಮಕ್ಕನೂ ಎದ್ದುಬಿಟ್ಟಳು. ಊಟವಾದ ಕೂಡಲೆ ಸುಮ್ಮಕ್ಕನ ಸಂಗ್ರಹದಿಂದ ಅಡಿಕೆಯ ಹೋಳು ಸಿಗದಿದ್ದರೆ ಆತನಿಗೆ ಸಮಾಧಾನವಿರುತ್ತಿರಲಿಲ್ಲ. ಆ ದಿನ ಊಟವಾದ ಕೂಡಲೆ ಶಾಲೆಯ ದಾರಿ ಹಿಡಿದ. ದಿನದ ರೂಢಿ ತಪ್ಪಿದ್ದರಿಂದ ಸುಮ್ಮಕ್ಕನ ಜೀವಕ್ಕೆ ಸಮಾಧಾನವೆನಿಸಲಿಲ್ಲ. ತಾನೂ ಶಾಲೆಗೆ ನಡೆದಳು. ಮಧ್ಯಾಹ್ನ ಸೂಟಿಯಲ್ಲಿ ಮನೆಗೆ ಬಂದವಳು ತಿರುಗಿ ಹೋಗಲಿಲ್ಲ.

ಸಂಜೆಯಾಯಿತು. ಇಂಗ್ರೇಜಿ ಶಾಲೆ ಬಿಟ್ಟು ಒಂದು ತಾಸಿನ ಮೇಲಾಯಿತು. ನೆರೆಮನೆಯ ಹುಡುಗರು ಬಂದರು. ಶ್ರೀನಿವಾಸನು ಬರಲಿಲ್ಲ. ಆಕೆಯ ಎದೆ ಒಡೆದು ನೀರಾಯಿತು. ಅಳುವೋರೆಗೆ ಬಂದಳು. ಅಷ್ಟರಲ್ಲಿ ದೂರದಿಂದ ಶ್ರೀನಿವಾಸ ಕಾಣಹತ್ತಿದ. ಆತುರದಿಂದ ಮನೆಯ ಕಟ್ಟೆಯ ಮೇಲೆ ಬಂದು ನಿಂತಳು. ಶ್ರೀನಿವಾಸ ಅವಳ ಕಡೆಗೆ ಕಣ್ಣೆತ್ತಿ ಸಹ ನೋಡದೆ ಒಳಗೆ ನಡೆದು ಬಿಟ್ಟ. ಸುಮ್ಮಕ್ಕನ ಅಭಿಮಾನ ಜಾಗೃತ ವಾಯಿತು. ಕಣ್ಣುಗಳಿಂದ ನೀರು ಉಕ್ಕಿದವು. ಆದರೂ ಶ್ರೀನಿವಾಸನ ದೃಷ್ಟಿಗೆ ಬೀಳಬಾರದೆಂದು ನೆರೆಮನೆಯ ಹುಡುಗರ ಕೂಡ ಆಡಲಿಕ್ಕೆ ನಡೆದಳು. ಜೀವ ಗಮಿಸಲಿಲ್ಲ. ಹಾಗೆ ದೀಪ ಹಚ್ಚುವ ವರೆಗೆ ತಡೆದು ಮನೆಗೆ ಬಂದಳು. ಶ್ರೀನಿವಾಸ ಎಂದಿಲ್ಲದೆ ಈವೊತ್ತು ಸಂಧ್ಯಾವಂದನೆ ಯಲ್ಲಿ ತೊಡಗಿದ್ದ. ದಿನ ಹಾಸಿಗೆಯ ಮೇಲೆ ಬಿದ್ದುಕೊಂಡು ಶ್ರೀನಿ ವಾಸನ ಕೂಡ ಸುಳ್ಳೊಂದು ಸೊಟ್ಟೊಂದು ಮಾತಾಡುತ್ತ ಕಣ್ಣು ಜಡ ಆಗುವ ವರೆಗೆ ಗೊಂದಲ ಹಾಕುವದು, ಆ ಮೇಲೆ ಭಟ್ಟರು ಇಬ್ಬರನ್ನೂ ಕೈಹಿಡಿದು ಕರಕೊಂಡು ಹೋಗಿ ಊಟಕ್ಕೆ ಹಾಕುವದು, ಹೀಗೆ ಕ್ರಮ ವಿತ್ತು. ಶ್ರೀನಿವಾಸನ ಸಂಧ್ಯಾವಂದನೆ ಮುಗಿಯಲಿಲ್ಲ. ಸುಮ್ಮಕ್ಕನ ಕಣ್ಣುಗಳೂ ಜಡವಾದವು. ಎಚ್ಚರಾದಾಗ ಬೆಳಗಾಗಿತ್ತು.

ಚಹಾ ಮುಗಿದ ಕೂಡಲೆ ಶ್ರೀನಿವಾಸ ಸ್ನಾನ ಮಾಡಿಕೊಂಡು ಓದುವದಕ್ಕೆಂದು ಹೊರಟ. ಸುಮ್ಮಕ್ಕನ ಪಾಟಿ ಈವೊತ್ತೆ ಸಿಗಬಾರದೆ !

" ನನ್ನ ಪಾಟಿ ಎಲ್ಲ್ಯದs— " ಸುಮ್ಮಕ್ಕ ಆತನ ಕಡೆಗೆ ನೋಡದೆ ಕೇಳಿದಳು. ಆಕೆಯ ಕಣ್ತುಂಬ ನೀರು.

ಶ್ರೀನಿವಾಸನಿಗೆ ಪಾಟಿಯು ಎಲ್ಲಿಯೂ ಹೋಗಿಲ್ಲವೆಂಬುದು ಗೊತ್ತು. ನಿನ್ನೆಯಿಂದ ಆತನ ಜೀವವು ಚಡಪಡಿಸುತ್ತಿತ್ತು. ಆದರೂ ಅಭಿಮಾನ. ಅವಳ ಈಗಿನ ಮನಃಸ್ಥಿತಿ ಚೆನ್ನಾಗಿ ತಿಳಿದಿತ್ತು.

" ನನಗೇನು ಗೊತ್ತು. ನಮ್ಮ ಸಾಲ್ಯಾಗ ಪಾಟಿ ಮ್ಯಾಲ ಬರದರ ಮಾರ್ಕಸ್ ಕೊಡೂದುಲ್ಲಾ. " ಅಷ್ಟೆ, ' ಇಲ್ಲ ' ಎನ್ನುವದಕ್ಕೆ ಬದಲಾಗಿ ಈ ಉದ್ದ ವಿವರಣೆ ಬಂದ ಕೂಡಲೆ ಸುಮ್ಮಕ್ಕ ತಿಳಕೊಂಡಳು.

"ಅಹಾಹಾ! ಗೊತ್ತದ" ಎಂದು ಕೈ ತಿರುವಿದಳು.

"ಏನು ಗೊತ್ತದ!" ಎಂದು ಕೇಳುತ್ತ ಶ್ರೀನಿವಾಸ ಹೊರಗೆ ಹೋಗುವದನ್ನು ಬಿಟ್ಟು ಕೆಳಗೆ ಕುಳಿತ.

"ಪಾಟಿ ಮ್ಯಾಲ ಬರದರ ಮಾರ್ಕಸ್ ಕೊಡೂದುಲ್ಲಾಂತs—" ಸುಮ್ಮಕ್ಕ ತನಗೆ ತಿಳಿಯದೆ ಆತನ ಹತ್ತರ ಹೋಗಿ ಕುಳಿತಿದ್ದಳು.

ಒಪ್ಪಂದವಾಯಿತು.

ಆ ದಿನ ಶ್ರೀನಿವಾಸ ಊಟಕ್ಕೆ ಕುಳಿತಾಗ ಆಕೆಯು ಮೇಲೆ ಭಂಡಿಯ ಮೇಲೆ ಭಂಡಿ ಏರಿಸಿದರೂ ಮಾತಿನಲ್ಲಿ ಅವಳಿಗೆ ಯಾತರ ಅರಿವೂ ಇದ್ದಿಲ್ಲ.

೩

ಸುಮ್ಮಕ್ಕನ ಕಿಡಿಗೇಡಿತನಕ್ಕೆ ಸುಮಾರು ಇದ್ದಿಲ್ಲ. ಭಟ್ಟರೂ ಒಮ್ಮೊಮ್ಮೆ ಮನಸು ಕಠೋರ ಮಾಡಿದರೆ ಅವರಿಗೂ ಸುಮಾರು ಉಳಿಯುತ್ತಿದ್ದಿಲ್ಲ. ಆ ದಿನ ಸುಮ್ಮಕ್ಕನಿಗೆ ಏನೊ ವಿಚಾರ ಬಂದು ಅವಳು ತನ್ನ ಮುಂಗುರುಳು,—ಇಲ್ಲ, ತನ್ನ ಕೂದಲುಗಳನ್ನು ಸಮವಾಗಿ ಮಾಡಿಕೊಳ್ಳಬೇಕೆಂದು ಅಲ್ಲಲ್ಲಿ ಕತ್ತರಿಸಿಕೊಂಡಳು. ಭಟ್ಟರಿಗೆ ವಾಗತ್ಯವೆನಿಸುವದು ಸಹಜ. ಇಂಥ ಅವಿಚಾರತನವು ಅವರಿಗೆ ಸೇರೀತೆ! ಅವಳಿಗೆ ಒಳ್ಳೆಯ ಏಟು ಕೊಟ್ಟು ಊಟವಿಲ್ಲದೆ ಒಂದು ಕೋಣೆಯಲ್ಲಿ ಹಾಕಿ ಕೀಲಿ ಹಾಕಿದರು. ಮಧ್ಯಾಹ್ನದ ಊಟವಿಲ್ಲ. ಸಂಜೆಯ ಊಟವಿಲ್ಲ. ರಾತ್ರಿ ಎಲ್ಲ ಕಡೆಯೂ ಸ್ತಬ್ಧವಾದಾಗ ತಾವೆ ಕೋಣೆಯ ಕೀಲಿ ತೆಗೆದು ಒಳಗೆ ಹೋದರು. ಸುಮ್ಮಕ್ಕ ಅತ್ತು ಅತ್ತು ದಣಿದು ಈಗ ಅವಳಿಗೆ ಗಾಢ ನಿದ್ರೆ ಹತ್ತಿತ್ತು. ಅವಳನ್ನೆಬ್ಬಿಸಬೇಕೆಂದು ಅವರ ಮನಸು ಹವಣಿಸಿತು. ಆದರೂ ಬಿಗಿಹಿಡಿದು ಒಂದು ಥಾಲಿಯಲ್ಲಿ ಹಾಲು ಇಟ್ಟು ಮತ್ತೆ ಕೋಣೆಯ ಬಾಗಿಲ ಮುಚ್ಚಿಕೊಂಡರು.

ಮರುದಿನ ಅವರಿಗೇ ನಿಲ್ಲಲಿಲ್ಲ. ಅವಳನ್ನು ಕೈಹಿಡಿದೆಬ್ಬಿಸಿ ತಿನ್ನಲಿಕ್ಕೆ ಕೊಟ್ಟು ಅವಳ ಸಮಾಧಾನ ಮಾಡುವ ತನಕ ಸಾಕುಬೇಕಾಗಿ ಹೋಯಿತು.

೪

ಹುಡಿಗೆ ದೊಡ್ಡವಳಾದಂತೆ ಮದುವೆಯ ಚಿಂತೆಯೂ ಬೆಳೆಯುವದು. ಭಟ್ಟರದೂ ಸಂಪನ್ನ ಸ್ಥಿತಿಯಲ್ಲ. ಅಲ್ಲಿ ಇಲ್ಲಿ ಸ್ಥಳಗಳನ್ನು ನೋಡಿದರು. ಕನ್ಯಾ ನೋಡಲಿಕ್ಕೆ ಬಂದವರು ತಿರುಗಿ ಮುಂದಿನ ಮಾತುಕಥೆಗೆ ಬರುತ್ತಿದ್ದಿಲ್ಲ. ಈ ದಿನವೂ ನೋಡಲಿಕ್ಕೆ ಬರತಕ್ಕವರಿದ್ದರು. ವರನೇನೋ ಕಾಲೇಜಿನಲ್ಲಿ ಕಲಿಯುತ್ತಿದ್ದನಂತೆ.

ನೋಡಲಿಕ್ಕೆ ಬರುವವರು ಯಾರೆ ಇರಲಿ, ಗೃಹಸ್ಥಧರ್ಮವನ್ನು ಪಾಲಿಸಲೆಬೇಕು. ಹೇಳಿಕಳಿಸಿದ ದಿನ ಅವರು ಬಂದರೆ ವರಪಕ್ಷದವರ ಮರ್ಯಾದೆಗೆ ಬಾಧೆ ಬರುವದೊ ಏನೊ. ಆ ದಿನ ಹಾದಿ ನೋಡಿದ್ದಾಯಿತಷ್ಟೆ.

ಸಾಧಾರಣ ಗೋಧೂಳಿ ಮುಹೂರ್ತ...ಅಲ್ಲ, ಆ ಮುಹೂರ್ತ ಮದುವೆಗೆ ಸಾಗುವದು. ಇದು ವಧೂಪರೀಕ್ಷೆ. ಇದಕ್ಕೆ ಮುಹೂರ್ತವು ಗೋಧೂಳಿಯಂತೆ ಶುಭವಿದ್ದು ಅದರಲ್ಲಿ ಸೂರ್ಯಪ್ರಕಾಶವೂ ನಿಚ್ಚಳವಾಗಿ ಇರಬೇಕು. ವಧುವಿನಲ್ಲಿಯ ವೈಗುಣ್ಯಗಳು ಸೂರ್ಯಪ್ರಕಾಶದಂತೆ,—ಅಥವಾ ಸೂರ್ಯಪ್ರಕಾಶದಲ್ಲಿ ನಿಚ್ಚಳವಾಗಿ ಕಾಣಲೇಬೇಕು.

ಪರೀಕ್ಷಕರ ಮಂಡಲ ಸರಿಯಾಗಿ ಹೇಳಿಕಳಿಸಿದ ವೇಳೆ ತಪ್ಪಿಸಿ ಬಂತು. ವರನೂ ಬಂದಿದ್ದಿರಬೇಕು. ಈ ವರಪುರುಷನು ಛದ್ಮವೇಷದಿಂದ ಬಂದು ವಧೂಪರೀಕ್ಷೆ ಮಾಡಿಕೊಂಡು ಹೋಗುವ ಪರಿಪಾಠವುಂಟು. ಬಂದ ಪರಿವಾರದಲ್ಲಿ ಯಾರೂ ವರನಂತೆ ಕಾಣುತ್ತಿದ್ದಿಲ್ಲ. ಅರ್ಥಾತ್ ವರನೂ ಬಂದಿರಲಿಕ್ಕೆ ಬೇಕೆಂಬುದಕ್ಕೆ ಇದಕ್ಕೂ ಹೆಚ್ಚಿನ ತರ್ಕಶುದ್ಧ ಪ್ರಮಾಣ ಬೇಕಿಲ್ಲ. ಎಲ್ಲರೂ ಯಥೋಚಿತ ಸ್ಥಾನಗಳನ್ನಲಂಕರಿಸಿದರು.

ಮೊಟ್ಟಮೊದಲು ಮಾಮೂಲಿ ಪ್ರಶ್ನೆಗಳೆಲ್ಲ ತೀರಿದವು. ಕನ್ನಡ, ಮರಾಠಿ ಪುಸ್ತಕಗಳನ್ನು ಓದಿಸಿಕೊಳ್ಳುವದಾಯಿತು. ಇನ್ನು ಇಂಗ್ರೇಜಿ ಓದಿಸಿಕೊಳ್ಳದೆ ಪರೀಕ್ಷೆ ಮುಗಿಯುವದೆ ಇಲ್ಲ.

“ ತಂಗಿ, ಇಂಗ್ರೇಜಿ ಓದಲಿಕ್ಕೆ ಬರತದೇನು ನಿನಗ—” ಯಾರೋ ಎಲ್ಲಿಂದಲೋ ಕೇಳಿದಂತೆ ಸುಮ್ಮಕ್ಕನಿಗೆ ಕೇಳಬಂತು.

ಅವಳ ಎದೆ ಹಾರಲಾರಂಭಿಸಿತು. ಅವಳು ಧೈರ್ಯಗೊಂಡು ಉತ್ತರ ಕೊಟ್ಟಳು.

“ ಇಪ್ಪತ್ತಾರು ಅಕ್ಷರ ಅಷ್ಟ ಬರತಾವ–” ಪರೀಕ್ಷಕ ಮಂಡಲ ದಲ್ಲಿ ಸ್ವಲ್ಪ ವಿನೋದದ ಗಾಳಿ ಸುಳಿದು ಸ್ವಲ್ಪ ಚರ್ಚೆಯೂ ಆದಂತಾ ಯಿತು.

“ ತಂಗಿ, ನಿನ್ನ ಹೆಸರೇನು ! ” ಒಬ್ಬ ಮಧ್ಯಮ ವಯಸ್ಕ ಕೇಳಿದ.

“ ಕುಸುಮಾ ! ”

“ ಓಹೊ! ಎಂಥಾ ಛಂದದs ಹೆಸರು. ಅಂತೂ ಭಟ್ರುs, ನೀವೂ ಹೊಸ ಸೆಳವಿಗೆ ಬಿದ್ರಿ. ತಂಗಿ, ಸುಮ ಅಂದರ ಏನವ್ವಾ?” ಆ ಕಕ್ಕು ಲತೆಯಿಂದ ತುಂಬಿ ತುಳುಕುತ್ತಿರುವ ದನಿಯನ್ನು ಕೇಳಿ ಸುಮ್ಮಕ್ಕನ ಮನಸು ಸ್ವಸ್ಥವಾಯಿತು.

ಅವಳಿಗೀಗ ತನ್ನ ಅಜ್ಜನ ಕೂಡ ಮಾತಾಡುವಾಗ ಬರುವಷ್ಟು ಧೈರ್ಯ ಬಂತು. “ ಹೂ—”

“ ಹೂs— ಭಲೆ, ಹೌದು ನೋಡ್ರಿ ಭಟ್ರ, ಹುಡುಗರೂಂದರ ಹೂವs ಮತ್ತs ”—ಒಂದು ನಿರ್ವಿಕಾರ ನಗೆ—“ ತಂಗಿ, ‘ ಕು ’ ಅಂದ ರೇನು ಹೇಳು ನೋಡೋಣ. ”

ಈಗ ಸುಮ್ಮಕ್ಕನಿಗೆ ಪೃಥ್ವಿಯು ಇಬ್ಭಾಗವಾಗಿ ಎಲ್ಲ ಆಧಾರ ಹೋದಂತೆನಿಸಿತು. ಮೇಲಕ್ಕೆ ನೋಡಿದಳು. ಆ ಎದುರಿನ ಮುಖದ ಮೇಲೆ ವತ್ಸಲತೆ. “ ಹಂs– ಹೇಳು ಅಂಜಬ್ಯಾಡಾ. ” ಏನೂ ತಿಳಿಯ ದಂತಾಗಿ ಅಜ್ಜನ ಕಡೆಗೆ ನೋಡಿದಳು. ಭಟ್ಟರು ತಲೆ ತಗ್ಗಿಸಿದ್ದರೂ ಸುಮ್ಮಕ್ಕನ ಕಡೆಗೆ ವಿಷಾದದಿಂದ ನೋಡುತ್ತಿದ್ದರು. ಈಗವಳಿಗೆ ಪುನಃ ಧೈರ್ಯ ಬಂತು. ನಿರ್ಭಯತೆಯಿಂದ ಒಮ್ಮೆ ಸುತ್ತಲೂ ನೋಡಿ, “ ಅರ್ಥಾಪರ್ಥ ನನಗ ಯಾರೂ ಕಲಿಸಿಲ್ಲ—” ಎಂದು ಹೇಳಿಬಿಟ್ಟಳು.

ಮಂಡಲದಲ್ಲಿ ಹಾಹಾಕಾರವೆದ್ದಂತೆ ತೋರಿತು. ಆಯಿತು. ಪರೀಕ್ಷೆ ಸಮಾಪ್ತಿಗೇ ಬಂತು.

"ನಾವು ಊರಿಗೆ ಹೋಗಿ ತಿಳಸ್ತೇವಿ, ಭಟ್ರ— ವಿಧಿ ಸಂಕಲ್ಪ ಇದ್ದರ ಆಗಿಹೋಗಲಿ" ಎಂದು ಹೇಳಿ ಆ ಮಧ್ಯಮ ವಯಸ್ಕ ಗೃಹಸ್ಥ ಹುಡಿಗೆಯ ಕೈಯಲ್ಲಿ ಮಿಠಾಯಿಯ ಪುಡಿಕೆಯನ್ನು ಕೊಟ್ಟು ಎದ್ದ. ಉಳಿದವರೂ ಎದ್ದುಬಿಟ್ಟರು.

ಭಟ್ಟರು ನಾಲ್ಕು ದಿನ ಪತ್ರದ ದಾರಿ ಕಾಯ್ದರು. ಪತ್ರ ಬಂತು. ಹುಡುಗನ ಮದುವೆ,- ಆ ಕಾಲೇಜಿನಲ್ಲಿದ್ದ ಉಪವಧುವಾದ ಪರಸ ಮದುವೆ ಮುಂದೆ ಬಿದ್ದಿತಂತೆ. ಆತನ ಕಕ್ಕ— ಬಹುತರವಾಗಿ ಆ ಮಧ್ಯಮವಯಸ್ಕ ಗೃಹಸ್ಥ, ಮೊನ್ನೆ ಮೊನ್ನೆ ವಿಧುರನಾಗಿದ್ದನಂತೆ— ಭಟ್ಟರು ಒಪ್ಪಿದರೆ ಆ ಗೃಹಸ್ಥನೆ— ಅಂತೂ ಪತ್ರದ ಮಥಿತಾರ್ಥ ತಿಳಿಯಿತು. ಇದೊಂದೆ ಅಲ್ಲ, ಇನ್ನೂ ಎಷ್ಟೋ ಇಂಥ ವಿಚಿತ್ರ ಅನುಭವ ಪರಂಪರೆಯು ಈ ವರಾರ್ಥಯಾತ್ರೆಯಲ್ಲಿ ಭಟ್ಟರಿಗೆ ಬಂದು ಕೊನೆಗೆ ಬೇಸತ್ತರು.

ವೈಶಾಖ-ಮಾಘಮಾಸಗಳ ಮುಹೂರ್ತಗಳೆಲ್ಲ ತೀರಿದವು. ಒಂದು ದಿನ ವೈಕುಂಠಪತಿಯ ದರ್ಶನಕ್ಕೆಂದು ಗಿರಿಗೆ ಹೊರಟುಬಿಟ್ಟರು. ಅಲ್ಲಿಯೆ ಆ ಸರ್ವಸಾಕ್ಷಿಯ ಸಾನ್ನಿಧ್ಯದಲ್ಲಿ ಒಂದು ಗೋರಜ ಮುಹೂರ್ತಕ್ಕೆ ಸುಮ್ಮಕ್ಕನನ್ನು, 'ಧರ್ಮೇ ಚ ಅರ್ಥೇ ಚ ಕಾಮೇ ಚ' ಶ್ರೀನಿವಾಸನಿಗೆ—ವೈಕುಂಠಪತಿಗಲ್ಲ— ಸಮರ್ಪಿಸಿ ಕೃತಾರ್ಥರಾದರು.

ಗಿರಿಯಿಂದ ಮರಳಿ ಬಂದು ಈಗ ಹದಿನೈದು ದಿನಗಳಾಗಿದ್ದವು. ಭಟ್ಟರು ಎಲ್ಲಿಯೊ ಹಳ್ಳಿಗೆ ಹೋಗಿದ್ದರು. ಸುಮ್ಮಕ್ಕ ಏನೊ ಒಂದು ಪುಸ್ತಕವನ್ನೋದುತ್ತ ಕೋಣೆಯಲ್ಲಿ ಕುಳಿತಿದ್ದಳು. ಶ್ರೀನಿವಾಸ ಹೊರಗೆ ಹೋದವ ತಿರುಗಿ ಬಂದಿದ್ದ. ಭಟ್ಟರು ಊರಿಗೆ ಹೋದದ್ದು ಗೊತ್ತಿದ್ದಿಲ್ಲವಾದರೂ ಅವರು ಮನೆಯಲ್ಲಿಲ್ಲವೆಂಬದು ತಿಳಿದುಬಂತು. ಅತ್ತಿತ್ತ ನೋಡಿದ. ಸುಮ್ಮಕ್ಕನೂ ಒಬ್ಬಳೆ ಇರುವಳೆಂಬದು ಕಂಡು

ಬಂತು. ಆತನು ಮೆಲ್ಲನೆ ಕೋಣೆಯಲ್ಲಿ ಪ್ರವೇಶಿಸಿದ. ಮದುವೆಯಾದ ಮೇಲೆ ಇದೇ ಮೊದಲನೆಯ ಭೆಟ್ಟಿ.

ಶ್ರೀನಿವಾಸ ಮನೆಗೆ ಬಂದದ್ದು ಸುಮ್ಮಕ್ಕನಿಗೆ ಗೊತ್ತಿತ್ತು. ಈಗ ಕೋಣೆಯಲ್ಲಿ ಬಂದದ್ದು ಗೊತ್ತಾಯಿತು. ಅವಳು ಎಷ್ಟೋ ಹೊತ್ತಿನ ವರೆಗೆ ಮೇಲಕ್ಕೆ ಮೋರೆಯನ್ನೆತ್ತಿ ಸಹ ನೋಡಲಿಲ್ಲ. ಶ್ರೀನಿವಾಸ ಒಳ್ಳೆಯ ಪೇಚಿನಲ್ಲಿ ಬಿದ್ದ. ತಾನೆ ಮಾತಿಗೆ ಪ್ರಾರಂಭ ಮಾಡಬೇಕೆಂದರೆ ಮನಸಿನಲ್ಲಿ ಒಂದು ಪ್ರಕಾರದ ಸಂಕೋಚವೆನಿಸಲಾರಂಭಿಸಿತು. ಆತನ ಪ್ರತಿಯೊಂದು ಅಂಗವಿಕ್ಷೇಪದ ಕಡೆಗೆ ಸುಮ್ಮಕ್ಕನ ಲಕ್ಷ್ಯವಿತ್ತು. ಆದರೂ ಆತನೆ ಮಾತಾಡಿಸದೆ ತಾನು ಪ್ರಾರಂಭ ಮಾಡಬಾರದೆಂದು ನಿಶ್ಚಯಿಸಿ ಕುಳಿತಿದ್ದಳು. ಶ್ರೀನಿವಾಸನ ನಾಲಗೆ ಜಡವಾದಂತೆ –ಬಾಯಿಂದ ಶಬ್ದಗಳು ಹೊರಡಲಿಲ್ಲ. ತಡೆದು ಕೊನೆಗೆ ಹೊರಗೆ ಹೊರಟ.

"ಇಲ್ಲೆ ಕೇಳತೀರೇನು !–" ಸುಮ್ಮಕ್ಕ ತಾನೆ ಪ್ರಾರಂಭ ಮಾಡಿದಳು. ಈ ಬಹುವಚನದ ಪ್ರಯೋಗದಿಂದ ಶ್ರೀನಿವಾಸ ಚಕಿತನಾಗಿ ನೋಡಿದ. ಅವಳ ದನಿಯು ಗದ್ಗದಿತವಾಯಿತು, ಮುಖದ ಮೇಲಿಂದಾಯಿತು ಅವಳ ಅಂತರಂಗದಲ್ಲಿ ನಡೆದ ವಿಚಾರದ ಕಲ್ಲೋಲವು ತಿಳಿಯುವಂತಿರಲಿಲ್ಲ. ಶ್ರೀನಿವಾಸ ಅವಳ ಮೋರೆಯ ಕಡೆಗೆ ಹಾಗೆ ನೋಡುತ್ತ ನಿಂತ.

"ನಿಂಗೆ ಹೇಗೋ ಮುಂಚೆ ಮದಿವಿ ಮಾತು ಗೊತ್ತಿದ್ದಿಲ್ಲೇನು ನಿಮಗ ?—"

ನ್ಯಾಯಾಧೀಶರ ಎದುರು ಆರೋಪಿತನ ಸ್ಥಿತಿಯಾದಂತೆ ಈಗ ಶ್ರೀನಿವಾಸನ ಸ್ಥಿತಿಯಾಗಿತ್ತು. "ಅಜ್ಜ ನನ್ನೆದುರಿಗೇನೂ ಮಾತಾಡಿದ್ದಿಲ್ಲ" ಎಂದು ತಡವರಿಸುತ್ತ ಉತ್ತರ ಕೊಟ್ಟ.

ಸುಮ್ಮಕ್ಕನ ಮುಖ ಕೆಂಪೇರಿತು. ಶ್ರೀನಿವಾಸ ಕೊಟ್ಟ ಉತ್ತರವು ತೀರ ಸುಳ್ಳಿರಬಹುದೆಂದು ಅವಳ ತಿಳಿವಳಿಕೆಯಾಗಿತ್ತು. ಅದನ್ನು ಹೋಗಲಾಡಿಸುವವರು ಯಾರು ! ಆ ಮಾತು ಅಶಕ್ಯವೆಂದು ತಿಳಿದು ಶ್ರೀನಿವಾಸ ಸುಮ್ಮನಿದ್ದ.

೫

ಆ ಮಾತಿಗೀಗ ೬-೭ ತಿಂಗಳುಗಳಾಗಿದ್ದವು. ಲೌಕಿಕಾಚಾರಗಳೆಲ್ಲ ಜಗತ್ತಿನ ದೃಷ್ಟಿಯಿಂದ ಸಾಂಗವಾಗಿದ್ದರೂ ಆ ಗಂಡಹೆಂಡಿರ ನಡುವೆ ಭಾಷಣವಿದ್ದಿಲ್ಲ. ಸುಮ್ಮಕ್ಕ ಕೇವಲ ಯಂತ್ರದ ಗೊಂಬೆಯಂತೆ ಮನೆಯಲ್ಲಿ ವರ್ತಿಸುತ್ತಿದ್ದಳು.

ಶ್ರೀನಿವಾಸ I. Sc. ಪರೀಕ್ಷೆಗಾಗಿ ಓದುತ್ತಿದ್ದ. ಪರೀಕ್ಷೆಯ ದಿನ ಸಮೀಪ ಬಂದ ನೆವಮಾಡಿ ಮನೆ ಬಿಟ್ಟು ಕಾಲೇಜಿನ ಹೊಸ್ಟೆಲಿನಲ್ಲಿ ಇರಹತ್ತಿದ. ಪರೀಕ್ಷೆಯಾಯಿತು. Excursion – ಸುಖಪ್ರವಾಸದ ಹೂಲಿ ಎದ್ದಿತು. ತಿರುಗಿ ಬಂದ ಮೇಲೆ ತುಸು ದಿನಗಳಲ್ಲಿಯೇ ಪರೀಕ್ಷೆಯ ಪರಿಣಾಮ ತಿಳಿಯಿತು. ಒಳ್ಳೆಯ ಮೇಲ್ತರಗತಿ ಹೊಂದಿದ್ದ. ಮುಂದಿನ ಅಭ್ಯಾಸಕ್ರಮಕ್ಕಾಗಿ ಅದೆ ಕಾಲೇಜಿನಲ್ಲಿ ಇರಬಹುದಾಗಿತ್ತು. ಆದರೂ ಭಟ್ಟರ ಮನವೊಲಿಸಿ ಪುಣೆಯ ಎಂಜಿನೀಯರಿಂಗ ಕಾಲೇಜಿಗೆ ಹೊರಟ. ಈ ಸುದ್ದಿಯಿಂದ ಸುಮ್ಮಕ್ಕನ ಮನಃಸ್ಥಿತಿಯಲ್ಲಿ ಏನೂ ಬದಲಾಗಲಿಲ್ಲ............

ಶ್ರೀನಿವಾಸ ಪುಣೆಯಲ್ಲಿದ್ದು ಈಗ ಒಂದು ವರ್ಷವಾಯಿತು. ಸನ್ ೧೯೩೭ರ ಡಿಸೆಂಬರ ತಿಂಗಳು. ಪುಣೆಯ ಯೂಥ ಲೀಗದ ಉತ್ಸಾಹಿ ತರುಣರು ಬಾಬು ಸುಭಾಷಚಂದ್ರ ಬೋಸ ಅವರ ಅಧ್ಯಕ್ಷತೆಯ ಕೆಳಗೆ ತಮ್ಮ ಪರಿಷತ್ತನ್ನು ಜರುಗಿಸಿದರು. ಉತ್ಸಾಹವು ಸಾವಿರ ಮುಖದಿಂದ ಉಕ್ಕಿ ಚೆಲ್ಲಹತ್ತಿತು. ಜನೆವರಿ ತಿಂಗಳಲ್ಲಿ ಮಹಾತ್ಮಾಜಿ ಮೊದಲಾದವರು ದುಂಡುಮೇಜಿನ ಪರಿಷತ್ತನ್ನು ತೀರಿಸಿಕೊಂಡು ಬಂದ ನಂತರ ಕಾಂಗ್ರೆಸ್ಸಿನಲ್ಲಿ ಸ್ವಾತಂತ್ರ್ಯಜೀವಿಗಳ ಪ್ರಾಬಲ್ಯವು ಬೆಳೆದು ದೇಶವು ತನ್ನ ಪುಣ್ಯಬಲವನ್ನೆಲ್ಲ ಆ ಸಮಯಕ್ಕೆ ಬೈಲಿಗಿಟ್ಟಿತು. ಯೂಥ್ ಲೀಗದ ಸರ್ವಾಧಿಕಾರಿಗಳು ಒಬ್ಬರ ಹಿಂದೆ ಒಬ್ಬರು ಕಾರಾಗೃಹವನ್ನು ಅಂಗೀಕರಿಸಿದರು. ಸರ್ವಾಧಿಕಾರಿಗಳ ಮಾಲಿಕೆಯಲ್ಲಿ ಶ್ರೀನಿವಾಸನ ಹೆಸರು ಐದನೆಯದಾಗಿ ಬಂದಿತು. ಯಥಾಕಾಲ, ಯಥಾವಿಧಿ ಆತನ ಮೇಲೂ ಸರಕಾರಿ ವಿಚಾರಣೆ ನಡೆಯಿತು.

೬

ಖಟ್ಲೆಯು ಕೆಲಸವೆಲ್ಲ ಪುಣೆಯುಲ್ಲಿ ನಡೆಯುತಕ್ಕದ್ದಿತ್ತು. ಭಟ್ಟರು ಸುಮ್ಮಕ್ಕನನ್ನು ಸಂಗಡ ಕರಕೊಂಡು ಬಂದಿದ್ದರು. ಇನ್ನೂ ಎರಡು ವಾರ ಶ್ರೀನಿವಾಸ ಪೋಲೀಸರ ಅಧೀನತೆಯುಲ್ಲಿರತಕ್ಕವನಿದ್ದ. ಆತನ ಕ್ಷಮೆಯು ಏರ್ಪಾಟಿಗಾಗಿ ಸರಕಾರಿ ಅಧಿಕಾರಸ್ಥರ ಪ್ರಯತ್ನಗಳೂ ನಡೆದಿದ್ದವು. ಭಟ್ಟರು ಅವರ ನೆಳವಿಗೆ ಬಿದ್ದರು.

"ಸೀನಾ, ಯಾಕ ಬೇಕು ನಿನಗಿದೆಲ್ಲ ಕಾರಭಾರ. ಕಲಿಯೋದು ಮುಗೀತಂದರ ದೇಶೀಯಾರ ಮಾಡು, ಪರದೇಶೀಯಾರ ಮಾಡು." ಭಟ್ಟರು ಅಂಗಲಾಚಿ ಬೇಡಿಕೊಂಡರು. ಕೊನೆಯು ಅಸ್ತ್ರವೆಂದು ಆತ್ಮಹತ್ಯೆಯು ಅಂಜಿಕೆ ಹಾಕಿದರು. ಗುಳಿಗೆ ನಾಟಿತು. ಶ್ರೀನಿವಾಸ ಕ್ಷಮೆ ಬೇಡಿಕೊಳ್ಳಲಿಕ್ಕೆ ಒಪ್ಪಿಕೊಂಡ.

ಇಂಥ ಸುದ್ದಿ ಹೊರಬೀಳದೆ ಹೋಗುವದಿಲ್ಲ. ಸುತ್ತಲೂ ಧಿಕ್ಕಾರದ ಧ್ವನಿಯೆ ಕೇಳಬರಹತ್ತಿತು. ಅದರಲ್ಲಿ ಪ್ರಾಂತೀಯ ಅಭಿಮಾನದಿಂದ ಅಂಧರಾದ ಅಸಮಂಜಸರು 'ಕಾನಡಿ ಅಪ್ಪಾ' ಎಂದು ಹೀಯಾಳಿಸಿ ಮಾತಾಡಹತ್ತಿದರು.

ಸುಮ್ಮಕ್ಕ ಆದ ಎಲ್ಲ ಸಂಗತಿಯುನ್ನು ನೋಡುತ್ತಲೆ ಬಂದಿದ್ದಳು. ಶ್ರೀನಿವಾಸನು ಭಟ್ಟರ ಮಾತಿಗೆ ಒಪ್ಪಿಕೊಂಡದ್ದನ್ನು ನೋಡಿ ಮರಣಪ್ರಾಯ ದುಃಖವೆನಿಸಿತು. ತನ್ನ ಅಭಿಮಾನ ತಿರಸ್ಕಾರಗಳನ್ನೆಲ್ಲ ಬದಿಗಿಟ್ಟು ಕ್ಷಮೆ ಕೊಡಬಾರದಾಗಿ ಆತನಿಗೆ ಹೇಳಬೇಕೆಂದು ಮಾಡಿದಳು. ಸಂಧಿ ಸಿಗಲಿಲ್ಲ.

ಆ ದಿನ ಪುಣೆಯುಲ್ಲಿ ಅದೇ ಒಂದು ವಿಷಯು. ಶ್ರೀನಿವಾಸನ ಪರಮ ಸ್ನೇಹಿತರಿಗೂ ಆತನ ವಿಷಯುವಾಗಿ ಸಾಶಂಕವೃತ್ತಿ ಹುಟ್ಟಿತ್ತು.

ಕೋರ್ಟಿನಲ್ಲಿ ಕಾಲಿಡುವದಕ್ಕೆ ಸಹ ಸ್ಥಲವಿದ್ದಿಲ್ಲ. ಆರೋಪಿಯುನ್ನು ಕೋರ್ಟಿಗೆ ಒಯ್ಯುವ Van - ಗಾಡಿಯು ದಾರಿಗುಂಟ ನಡೆದಾಗ 'Shame! Shame!'ದ ವರ್ಷಾವವಾಯಿತು. ಕಲ್ಲು ಬಿದ್ದವು.

ಕೋರ್ಟಿಗೆ ತಂದ ಮೇಲೆ ಆತನು ಪೋಲೀಸರ ಸಂರಕ್ಷಣೆಯಲ್ಲಿದ್ದ. ಹೊರಗೆ ಪ್ರೇಕ್ಷಕರ ಚೀತ್ಕಾರ ಕೇಳಿಸುತ್ತಲಿತ್ತು.

ಮ್ಯಾಜಿಸ್ಟ್ರೇಟರು ಬಂದ ಬಳಿಕ ಕೋರ್ಟು ಪ್ರಾರಂಭವಾಯಿತು. ಪ್ರಾಸ್ತಾವಿಕ ಪ್ರಶ್ನೋತ್ತರಗಳಾದ ಮೇಲೆ ಆರೋಪಿ ಶ್ರೀನಿವಾಸನ ಚಿಕ್ಕ ವಯಸ್ಸು ನೋಡಿ ಮ್ಯಾಜಿಸ್ಟ್ರೇಟರು ಕನಿಕರಪಟ್ಟರು.

" You are very young. Better you should finish your career. Are you willing to tender your apology ? "

ಎಲ್ಲರ ದೃಷ್ಟಿ ಆತನ ಕಡೆಗೆ ಇತ್ತು. ಆತನು ಸುತ್ತಲೂ ನೋಡಿದ. ಎದುರಿಗೊಂದು ಕುರ್ಚಿಯ ಮೇಲೆ ಸುಮ್ಮಕ್ಕನನ್ನು ನೋಡಿದ. ಅವಳು ಆತನ ಕಡೆಗೆ ನೋಡುತ್ತಿದ್ದಿಲ್ಲ. ನಿಶ್ಚಲವಾದ ಒಂದು ಪ್ರತಿಮೆಯಂತೆ ಕುಳಿತಿದ್ದಳು.

ಆತನ ಮುಖದಿಂದ ಒಮ್ಮೆಲೆ ಹೊರಟಿತು–"No, Your Honour."

ಜಯಭೇರಿಯಂತೆ ಕೋರ್ಟಿನಲ್ಲಿ ಒಂದೇ ಗಲಭೆ ಎದ್ದಿತು. ಸುಮ್ಮಕ್ಕ ಮೂರ್ಛಿತಳಾಗಿ ಬಿದ್ದದ್ದು ಕೆಲಹೊತ್ತು ಯಾರ ಲಕ್ಷ್ಯಕ್ಕೂ ಬರಲಿಲ್ಲ.

೭

ಶ್ರೀನಿವಾಸನಿಗೆ ಮೂರು ವರ್ಷ ಸಶ್ರಮ ಕಾರಾಗೃಹವಾಯಿತು. ಶಿಕ್ಷೆಯಲ್ಲಿಯ ೩ ತಿಂಗಳುಗಳು ಕಳೆದಿದ್ದವು. ಭಟ್ಟರು ಭೆಟ್ಟಿಗೆಂದು ಹೋದಾಗ ಸುಮ್ಮಕ್ಕನನ್ನೂ ಕರಕೊಂಡು ಹೋಗಿದ್ದರು. ಭೆಟ್ಟಿಯ ಕಾಲಕ್ಕೆ ಭಟ್ಟರು ಕಾರಕೂನನ ಕೂಡ ಮಾತಾಡುವ ಭರದಲ್ಲಿ ಹೊರಗೆ ಹೋದರು.

ಇಬ್ಬರೆ ಉಳಿದರು.

ಸುಮ್ಮಕ್ಕ ಮೃದುವಾಗಿ ಕೇಳಿದಳು " ಇನ್ನೆಷ್ಟು ದಿನ ಉಳಿದ್ಹಾಂಗ ಆತು ? "

ಶ್ರೀನಿವಾಸ ಚಕಿತನಾಗಿ ನೋಡಿದ.

ಅವಳ ಕಣ್ಣುಗಳಿಂದ ಅವಿರತ ಅಶ್ರುಪ್ರವಾಹ ನಡೆದಿತ್ತು.

## ಅನಾಥರಕ್ಷಕ

ಗಂಗಾಪ್ರಸಾದರು ಎಲ್ಲರಿಗೆ ಬೇಕಾದವರು. ಉತ್ತರ-ಹಿಂದುಸ್ಥಾನ ದಿಂದ ಎಂದೋ ಒಂದು ದಿನ ದಕ್ಷಿಣಕ್ಕೆ ಬಂದಿದ್ದರು. ಬಂದದ್ದು ಕೇವಲ ಒಂದು ರೇಲ್ವೆ ಕಂಪನಿಯ ಎಂಜಿನಿಯರರಾಗಿ. ಸ್ವಲ್ಪ ದಿನಗಳಲ್ಲಿ ವರಿಷ್ಟರ ಕೂಡ ಸಾಗದಂತಾಗಿ ಅವರು ಕೆಲಸಕ್ಕಂತೂ ಶರಣು ಹೊಡೆದರು. ಆದರೆ ತಮ್ಮ ದೇಶಕ್ಕೆ ಮರಳಿ ಹೋಗದೆ ತಮ್ಮ ಸ್ವಂತದ ಪತ್ತಿನ ಮೇಲೆ ಕಟ್ಟಿಗೆಯ ವ್ಯಾಪಾರವನ್ನು ನಡೆಯಿಸಿದರು. ಕಂಪನಿಯ ಕೆಲಸದ ಮೇಲಿದ್ದಾಗ ಅಡವಿ ಅಡವಿ ತಿರುಗಿ ಗಳಿಸಿಟ್ಟ ಅನುಭವವು ಈಗ ಕೈಕೊಟ್ಟಿತು. ಲಕ್ಷ್ಮಿಯೂ ಒಂದು ದಿನ ಅವರ ಕಡೆಗೆ ಒಲೆದಳು. ಆ ಮಾತಿಗಿದೀಗ ೨೦ ವರ್ಷಗಳಾದವು. ವೈಭವದ ಅಂತಸ್ತಿನ ಮೇಲೆ ಅಂತಸ್ತು ಏರಿತು.

ಒಂದು ದಿನ ಅತಿ ಶ್ರಮದ ನೆವವಾಗಿ ಜ್ವರ ಬಂದುಬಿಟ್ಟಿತು. ದಿನ ಗಳು ಸಾಗಿದವು. ಜ್ವರ ಸರಿಯಲಿಲ್ಲ. ಕ್ಲುಪ್ತಜ್ವರವೆಂದು ಡಾಕ್ಟರರ ಕಾಯಾಸವಾಯಿತು. ಒಂದಕ್ಕೆ ನಾಲ್ಕರ ಮೇಳ ಕೂಡಿತು. ಒಂದು ದಿನ ಅವರೂ ನಿರಾಶರಾದರು. ಈಗಂತೂ ಗಂಗಾಪ್ರಸಾದರು ಆಸನ್ನ ಮರಣರಾಗಿ ಬಿದ್ದಿರುವರು.

ಮನೆಯಲ್ಲಿ ಲೆಕ್ಕವಿಲ್ಲದ ಆಳುಹೋಳು. ಅವರ ಪರಿಚರ್ಯೆಯಲ್ಲಿ ಮಾತ್ರ ಒಬ್ಬ ಸ್ತ್ರೀಯು ಕೈಕಟ್ಟಿ ನಿಂತಿರುವಳು. ಈಗ ಮೂರು ದಿನ ಗಳಿಂದ—ಡಾಕ್ಟರರು ತಮ್ಮ ವಜ್ರಲೇಪ ನಿರ್ಣಯವನ್ನು ಹೇಳಿದಂದಿನಿಂದ—ಅವಳು ಅವರನ್ನು ಕ್ಷಣಹೊತ್ತು ಬಿಟ್ಟಿರಲಿಲ್ಲ.

ರೋಗಿಗಳಿಗೆ ರಾತ್ರಿಯೆಂದರೆ ಕಾಲರಾತ್ರಿಯೆ. ಒಂದು ಬೆಳಗು ಕಂಡರೆ ಪುನರ್ಜನ್ಮವನ್ನೆ ಕಂಡಂತೆ.

ರಾತ್ರಿಯು ಎರಡು ಘಂಟೆಯಾಗಿದ್ದಿರಬಹುದು. ರೋಗಿಗೆ ಈಚಿನ ಧ್ಯಾನವಿರಲಿಲ್ಲ. ಪರಿಚಾರಕಳು-ಆ ಸ್ತ್ರೀಯು, ಅವರ ಕಡೆಗೆ ಕಣ್ಣಿಟ್ಟು ನೋಡುತ್ತ ಕುಳಿತಿದ್ದಳು. ಕಣ್ಣೀರಿನ ಧಾರೆ ಒಂದೇ ಸಮನೆ ನಡೆದಿತ್ತು. ಒಂದೊಂದು ನೆನಪಾಗಹತ್ತಿತು. —ಅವಳೂ ಒಬ್ಬ ಗೃಹಸ್ಥನ ಹೆಂಡತಿ ಚಿಕ್ಕವಳಿದ್ದಾಗ ಮದುವೆಯಾಯಿತು. ಅಂದಿನಿಂದ ಅತ್ತೆಯ ಮನೆಯವರೆನ್ನುವವರು ಅವಳ ತಂದೆತಾಯಿಗಳೊಡನೆ ಜಗಳ ಹೂಡಿದರು. ಒಮ್ಮೆಯೆ ಏನೊ, ಅತ್ತೆಯ ಮನೆಗೆ ಹೋಗಿದ್ದಳು. ಹೊಡೆದು, ಬಡೆದು, ಉರಿಸಿ ಹೊರಗೆ ಹಾಕಿದರು. ಆಗವಳು ೧೨-೧೩ ವಯಸ್ಸಿನವಳಾಗಿದ್ದಿರಬಹುದಷ್ಟೆ. ತವರುಮನೆ ತಪ್ಪಿದ್ದಲ್ಲ. ಮರಳಿ ಬಂದಳು. ತಂದೆತಾಯಿಗಳ ಆಧಾರ ಹೆಚ್ಚಿನದು. ನಾಲ್ಕು ದಿನ ಸುಖವಾಗಿ ನಡೆದವು ಸಮವಯಸ್ಕ ಗೆಳತಿಯರ ಸಂಸಾರ ನೋಡಿ ಒಮ್ಮೊಮ್ಮೆ ಏನೊ ವಿಕಾರಗಳು ಹುಟ್ಟುತ್ತಿದ್ದವು. ಗಾಳಿಯ ಸುಳಿ, ಎಲ್ಲಿಯೊ ಮಾಯವಾಗುತ್ತಿತ್ತು. . ಒಂದು ದಿನ ತಂದೆತಾಯಿಗಳ ಆಸರ ತಪ್ಪಿತು. ಆ ಛತ್ರವೂ ಇಲ್ಲದಂತಾಯಿತು. ಎಲ್ಲಿಂದಲೋ ಒಬ್ಬ ಕರ್ಕಶ ಮಗನು ಬಂದು ಇದ್ದ ಚೂರು ಚಾರು ಆಸ್ತಿಯನ್ನು ಕೈಸೇರಿಸಿಕೊಂಡು ಅವಳನ್ನು ಗಂಡನ ಮನೆಗೆ ತಂದುಬಿಟ್ಟು, ತಾನು ನಡೆದುಬಿಟ್ಟನು. ಅತ್ತೆ ಆಗ ತೀರಿದ್ದಳು. ಮಾವನಿಗೂ ಸಂಸಾರವು ತಿಕ್ಕಿಮುಕ್ಕಿದಂತಾಗಿ ಆತನು ಮಗನ ಮೇಲೆ ಮನೆಯನ್ನು ಬಿಟ್ಟು ತಾನು ಕಾಶಿವಾಸ ಮಾಡಿದ್ದನು. ಅವಳಿಗೆ ಗಂಡನ ಆಸರವಂತೂ ಸಿಕ್ಕಂತಾಯಿತು. ಆದರೆ ಆ ನರಕಯಾತ್ರೆಯ ಒಂದೊಂದು ಅನುಭವವು ತೀವ್ರವೆ ಕಾಣಹತ್ತಿತು. ಮನೆಯ ಉದ್ಯೋಗ ವಿಂತಾಯಿ

ಮಾರುವದು. ಮನೆ ಹಿಡಿದುಕೊಂಡಿದ್ದರೆ ಆ ಉದ್ಯೋಗ. ಮನೆಗೆ ಬರುವದೆ ಸಿಕ್ಷಿತವಲ್ಲ.. .ಮನೆಯ ಹತ್ತಿರವೆ ಸರಾಯಿಯ ಅಂಗಡಿಯಿತ್ತು. ಗಂಡ ಅಲ್ಲಿಯೆ ಹಗಲಿರುಳು ಕಾಲ ಕಳೆಯುತ್ತಿದ್ದ. ಮನೆಗೆ ಬಂದಾಗ ನಾಲ್ಕು ಏಟು ಒಡಕೊಳ್ಳುತ್ತಿದ್ದ. ಅಷ್ಟರಲ್ಲಿ ಎಲ್ಲಿಂದಲೋ ಸುಖದ ಗಾಳಿ ಸುಳಿಯಹತ್ತಿತು. ಒಂದೆರಡು ದಿನ ಗಂಡ ಸುಸೂತ್ರವಾಗಿ ಮಾತನಾಡಹತ್ತಿದ. ಅವಳಿಗಾಶ್ಚರ್ಯ. ಒಂದು ದಿನ ಪ್ರೀತಿಯ ಮಾತು-ಕಥೆ ನಡೆದಾಗ ಗುಟ್ಟು ಹೊರಬಿದ್ದಿತು. ಸರಾಯಿಯಂಗಡಿಯ ಮಾಲಕನ ಕಣ್ಣಿಗೇನೊ ಅವಳು ಬಿದ್ದಳಂತೆ. ಸಂತಾಪ ತಲೆಗೇರಿ ಬಾಯಿ ಹರಿಬಿಟ್ಟಳು. ಮಾತಿಗೆ ಮಾತು ಬೆಳೆಯಿತು. ಆತ ಅವಳನ್ನು ಹೊಡ ಕೊಂಡ—ದಿನಕ್ಕಿಂತ ನಾಲ್ಕು ಏಟು ಹೆಚ್ಚು....... ....ಜೀವ ಬೇಸರ ವಾಯಿತು. ದಿನ ನಡೆದವು. ಇತ್ತೀಚೆಗೆ ಅವಳಿಗೂ ಸ್ವಲ್ಪ ಸರಾಯಿ ಕುಡಿಯಬೇಕೆಂದೆನಿಸಹತ್ತಿತ್ತು........ನರಕ ವಾಸದ ಅರಿವಾದರೂ ಕ್ಷಣ ಹೊತ್ತು ಮರೆಯಾದೀತು, ಇದೇ ಆಶೆ. ಅವರಿವರ ಮುಖಾಂತರ ಸರಾಯಿ ತರಿಸಹತ್ತಿದಳು. ಗಂಡನು ಅದನ್ನು ತಿಳಿದುಕೊಂಡನು. ಒಂದು ದಿನ ಹೊತ್ತು ಸಾಧಿಸಿ ಸರಾಯಿಯಂಗಡಿಯ ಮಾಲಕನನ್ನು ಮನೆಗೆ ಕರೆದುಕೊಂಡು ಬಂದುಬಿಟ್ಟ.—ಮನಸ್ಸಿನ ಮರ್ಯಾದೆ ಮುರಿಯಿತು. ಇದೊಂದು ಆಯುಷ್ಯಕ್ರಮ.......ಆ ದಿನ ಗಂಡ ಊಟಕ್ಕೂ ಬಂದಿರ ಲಿಲ್ಲ. ರಾತ್ರಿಯಾಯಿತು. ಆ ಇನ್ನೊಬ್ಬನೂ ಬರಲಿಲ್ಲ. ಒಂಟಿಗತನವು ಬೇಡವಾಯಿತು. ಏನೊ ಒಂದು ವಿಚಾರ ಬಂದು ಮನೆ ಬಿಟ್ಟು ಹೊರಗೆ ಬಂದುಬಿಟ್ಟಳು. ಎದುರಿಗೆ ಕಂಡ ದಾರಿ ಹಿಡಿದಳು. ಸರಾಯಿಯ ಮಬ್ಬು ಇನ್ನೂ ಇಳಿದಿರಲಿಲ್ಲ, ಗಾಳಿಗೆ ಚೇತರಿಸಿಕೊಂಡಂತಾಯಿತು. ಪುನಃ ಮಬ್ಬು. ಹಾಗೆ ನಡೆದಳು.... ಅವಳನ್ನೆಲ್ಲಿಯೊ ತಂದು ಬಿಟ್ಟಂತೆನಿ ಸಿತು. ಒಂದು ಉತ್ಕೃಷ್ಟ ಮಂಚದ ಮೇಲೆ ಮಲಗಿಸಿತ್ತು. ಕಣ್ಣು ತೆರೆದು ನೋಡಿದಳು. ವಿಶ್ವಾಸವೆನಿಸಲಿಲ್ಲ. ಮತ್ತೆ ಕಣ್ಣು ಮುಚ್ಚಿದಳು. ಏನೊ ಸಪ್ಪಳವಾದಂತೆನಿಸಿ ಕಣ್ಣು ತೆರೆದು ನೋಡಿದಳು. ಒಬ್ಬ ಮಧ್ಯಮ ವಯಸ್ಕನಾದ ಗೃಹಸ್ಥ ಚಿಂತಾಕ್ರಾಂತನಾಗಿ ಅವಳ ಕಡೆಗೇ ನೋಡು ತ್ತಿದ್ದ. ವಿಳತೊಡಗಿದಳು. ಹಾಗೇ ಮಲಗಿಕೊಳ್ಳಲಿಕ್ಕೆ ಹೇಳಿ ಹೊರಟು

ಹೋದ. ಎಷ್ಟೋ ವಿಚಾರ ಮಾಡಿ ನೋಡಿದಳು. ಮೋರೆಯ ಗುರುತು ಸಿಗಲಿಲ್ಲ. ಇದುವರೆಗಂತೂ ನೋಡಿದಂತೆ ತೋರಲಿಲ್ಲ. ಹಾಸಿಗೆಯ ಮೇಲೆ ಎದ್ದು ಕುಳಿತಳು. ಆಳು ಬಂದು ಮೋರೆಗೆ ನೀರು, ಚಹಾ ತಂದಿಟ್ಟು ಹೋದ. ಎದ್ದು ಮೋರೆ ತೊಳೆದುಕೊಂಡು ಚಹಾ ಮುಗಿಸು ವಷ್ಟರಲ್ಲಿ ಆಳುಗಳು ಸಾಮಾನು ಕಟ್ಟುವದರಲ್ಲಿ ತೊಡಗಿದರು. ಹೊರಗೆ ಒಂದು ಭವ್ಯವಾದ ಮೋಟರು ಬಂದು ನಿಂತಿತು. ಏನೂ ತೋಚ ದಂತಾಗಿ ನಿಂತಳು. ಆ ಗೃಹಸ್ಥನೆ ಬಂದು ತನ್ನ ಹಿಂದೆ ಬರುವದಕ್ಕೆ ಕೈಮಾಡಿದ. ಅವಳು ಹೊರಟಳು. ಆತನು ಮುಂದೆ ಹೋಗಿ ಮೋಟರಿನ ಬಾಗಿಲ ತೆರೆದು ನಿಂತನು. ಅವಳು ಸಂಕೋಚದಿಂದ ಒಳಗೆ ಕುಳಿತಳು. ಆತನು ತಾನು ಇನ್ನು ಒಳಗೆ ಕೂಡುವವನು ಏನೊ ವಿಚಾರ ಮಾಡಿ ಬಾಗಿಲ ಮುಚ್ಚಿ ಮುಂದಿನ ಬದಿಗೆ 'ಶೋಫರ'ನ ಹತ್ತರ ಕುಳಿತನು. ಮೋಟರು ಹೊರಟಿತು. ಗಿಡಗಳ ಸಾಲುಗಳು ಹಿಂದೆ ಉಳಿಯುಹತ್ತಿದವು. ಕಣ್ಣು ಮುಚ್ಚಿ ಅಲ್ಲಿಯೆ ಒರಗಿಕೊಂಡಳು. ಮೋಟರು ನಿಂತಾಗ ಹೊತ್ತು ಏರಿಹೋಗಿತ್ತು. ಅವರೀಗ ಬಂದನ್ನು ಒಂದು ದೊಡ್ಡ ಬಂಗ್ಲೆಯ ಎದುರಿಗೆ. ಆಳುಗಳು ಓಡಿಬಂದು ಬಾಗಿಲ ತೆರೆದರು. ಆ ಗೃಹಸ್ಥ ಕೆಳಗಿಳಿದು ಮೋಟಾರಿನ ಬಾಗಿಲ ತೆರೆದು ಹಿಡಿದ. ಕೆಳಗಿಳಿದು ಆತನ ಬೆನ್ನ ಹಿಂದಿನಿಂದ ಒಳಗೆ ಹೋದಳು........ಆ ಮಾತಿಗೀಗ ೧೨ ವರ್ಷಗಳಾಗಿ ಹೋಗಿದ್ದವು. ಮೊದಮೊದಲು ಯಾರಾದರೂ ಹುಡುಕಲಿಕ್ಕೆ ಬರುವರೊ ಏನೊ ಎಂಬ ಅಂಜಿಕೆಯಿಂದ ಹೊರಗೇ ಬರುತ್ತಿರಲಿಲ್ಲ. ಯಾರೂ ಬರಲಿಲ್ಲ. ಅಂಜಿಕೆಯೂ ಮುರಿಯಿತು. ತುಸು ದಿನಗಳಲ್ಲಿ ಆ ಗೃಹಸ್ಥನು ದೊಡ್ಡ ವ್ಯಾಪಾರಸ್ಥನಿದ್ದು ಆತನ ಹೆಸರು ಗಂಗಾಪ್ರಸಾದ ಎಂದು ತಿಳಿದುಬಂದಿತು. ಗೃಹಸ್ಥನ ವ್ಯಾಪಾರ ದೊಡ್ಡದು. ಅಡವಿ ಅಡವಿ ತಿರುಗುವುದು,—ಹೊತ್ತಿಗೆ ಊಟವಿಲ್ಲ. ಮಳೆಗಾಲದಲ್ಲಿ ವಿಶ್ರಾಂತಿ. ಸುಖದಿಂದಂತೂ ಇದ್ದಳು. ಅಷ್ಟರಲ್ಲಿ ಈ ಜಡ್ಡು ಬಂದಿತು. ಅವರ ಜೀವಕ್ಕೇನಾದರೂ ಅಪಾಯವಾದರೆ ಪುನಃ ಬೀದಿ. ಒಮ್ಮೆ ದಿಕ್ಕಿಲ್ಲದಾಗ ದಿಕ್ಕು ಸಿಕ್ಕಿತು. ಈಗ ದಿಕ್ಕು ತಪ್ಪಿದರೆ........ಹತ್ತು ಹನ್ನೆರಡು ವರ್ಷ ಗಳಲ್ಲಿ ಅವರ ಆಪ್ತರೂ ಯಾರೂ ಒಂದಂತೆ ತೋರಲಿಲ್ಲ. ಅವಳೂ

ಕೇಳಲಿಲ್ಲ. ಈಗ ಕೈಮೀರಿ ಬಂದಾಗ ಕೇಳಿನೋಡಿದಳು. ಅದೇ ಉತ್ತರ. ಆಪ್ತರೇ ಇರಲಿಕ್ಕಿಲ್ಲ. ಅವರಿಗಿರಲಿಕ್ಕಿಲ್ಲ. ಅವರ ಆಸ್ತಿಗೆ ಅನೇಕರಾಗ ಬಹುದು. ತನ್ನ ಗತಿ ಏನು!....ಮೈ ಅದುರಿತು.

ಅಷ್ಟರಲ್ಲಿ—

'ಹಿರಾ,—' ರೋಗಿಯು ಕೂಗಿದ.

'ಚೂಪ್ ಚೇಪ್ ಪಡ ರಹೊ. ನೀಂದ ಪಡೇಗಿ. ಅಚ್ಛೇ ಹೋಗೆ.' ಪ್ರೇಮದಿಂದ ಆತನ ಮೈಮೇಲೆ ಕೈಯಾಡಿಸಿದಳು.

'ಗಯೆ!' ಕಕ್ಕಾವಿಕ್ಕಿಯಾಗಿ ಅತ್ತಿತ್ತ ನೋಡಹತ್ತಿದ.

'ಕ್ಯಾ ದೇಖತೇ ಹೋ!' ಅವಳು ಗಾಬರಿಯಾಗಿ ಕೇಳಿದಳು.

'ಸಾಧ ಆಸೇ ಮಾಂಗತೇಥೆ. ತೇರೆ ಲಿಯೆ, ಹೀರಾ, ಮೈ ಯಹೀ ರಹೂಂಗಾ' ಆತ ಪ್ರಯಾಸದಿಂದ ಮಾತಾಡಿ ಮುಗಿಸಿದ. ಆದರೂ ಮನಸು ಸ್ವಸ್ಥವಾದಂತೆ ತೋರಲಿಲ್ಲ. ಗ್ಲಾನಿಯೂ ಹೆಚ್ಚುತ್ತ ನಡೆದಿತ್ತು.

ಅವಳು ಗಾಬರಿಯಿಂದ [illegible] ನೋಡಿದಳು. ಯಾರೂ ಇರಲಿಲ್ಲ. ಪುನಃ ರೋಗಿಯ ಕಡೆಗೆ ನೋಡಿದಳು. ಆತನಿಗೆ ಗಾಢನಿದ್ರೆ ಹತ್ತಿತ್ತು.

* * * * * * *

ಗಂಗಾಪ್ರಸಾದರೂ ಗುಣವಾಗಿ ಮತ್ತೆ ತಮ್ಮ ವ್ಯವಸಾಯದಲ್ಲಿ ತೊಡಗಿರುವರು. ಅವಳೂ ಅಲ್ಲಿಯೇ ಇರುವಳು.

# ರೋಹಿಣಿ

"ರಾಮುಡು, ನದೀಗೆ ಹೋಗೋಣ?" ರೋಹಿಣಿಯು ಏನೊ ಒಂದು ವಿಚಾರ ಮಾಡುತ್ತ ನುಡಿದುಕೊಂಡಳು. ರಾಮುಡು ತಯಾರಾಗಿ ರೋಹಿಣಿಯ ಮೋರೆಯ ಕಡೆಗೆ ನೋಡುತ್ತ ನಿಂತ. ಈ ದಿನ ಹೊರ ಹೊರಡುವಾಗ ರೋಹಿಣಿಯದೇನೂ ಪರಿಷ್ಕಾರವಿದ್ದಂತೆ ತೋರಲಿಲ್ಲ. ಒಮ್ಮೆ ರಾಮುಡುವಿನ ಕಡೆಗೆ ನೋಡಿ ಆತನಿಗೆ ಏನೋ ಹೇಳಬೇಕೆಂದು ಮಾಡಿದಳು. ಅಷ್ಟರಲ್ಲಿ ವಿಚಾರ ಬದಲಾಗಿ ಏನೂ ಮಾತಾಡದೇ ಹೊರಬಿದ್ದಳು.

ದಾರಿಯಲ್ಲಿ ಯಾರೂ ಮಾತಾಡಲಿಲ್ಲ. ನದಿಗೆ ಬಂದು ಮುಟ್ಟಿದ ಕೂಡಲೆ ಅಲ್ಲಿಯೇ ಒಂದು ಶಿಲಾಖಂಡದ ಮೇಲೆ ಕುಳಿತುಕೊಂಡಳು. ಗಾಳಿ ಬೀಸಿ ಬೀಸಿ ಮುಂಗುರಳಗಳು ಹಾರಹತ್ತಿದವು. ಒಂದೆರಡು ಸಲ ಕೂದಲುಗಳನ್ನು ಕಟ್ಟಿಕೊಳ್ಳುವ ಪ್ರಯತ್ನ ಮಾಡಿದಳು. ಆ ಪ್ರಯತ್ನ ಸಾಧ್ಯವಾಗದ್ದರಿಂದ ಹಾಗೇ ಕಣ್ಣು ಮುಚ್ಚಿ ಒರಗಿಕೊಂಡಳು. ರಾಮುಡು ಹತ್ತಿರ ಹೋಗಿ ಅವಳ ಹಣೆಯ ಮೇಲೆ ಕೈಯಿಟ್ಟು, "ರೋಹಿಣಿ, ತಲೆ ನೊಯಿಸ್ತದ?" ಎಂದು ಕರುಣ ಸ್ವರದಿಂದ ಕೇಳಿದ. ರೋಹಿಣಿಯು ಮಲಕೊಂಡಲ್ಲಿಯೆ "ಉಂ-

ಹುಂಽ—!" ಎಂದು ಮೋರೆ ತಿರುವಿ ಗಾಳಿಗೆ ವ್ಯೈಯ್ಯೊಡ್ಡಿದಳು ರಾಮುಡು ಹತ್ತಿರದಿಂದೆದ್ದು ತುಸು ದೂರ ಕುಳಿತ.

"ರಾಮುಡುಽ—"

"ಏನು ಬೇಕು ನಿನಗೆ, ರೋಹಿಽ!"

"ಜಂಕ ಇದ್ದಾನೇನು ನೋಡು."

"ಜಂಕ"ನೆಂದರೆ ಅಂಬಿಗರ ವೆಂಕ. ರಾಮುಡು ಆತನನ್ನು ನೋಡಲಿಕ್ಕೆಂದು ಹೊರಟ. ರೋಹಿಣಿಯೂ ಎದ್ದು ಆತನ ದಾರಿಯ ಕಡೆಗೇ ನೋಡುತ್ತ ಕುಳಿತಳು.

ಚಂದ್ರೋದಯವಾಯಿತು. ಚಂದ್ರಬಿಂಬವು ನೀರಿನಲ್ಲಿ ಪ್ರತಿಬಿಂಬಿಸಿ ನೀರಿನ ತೆರೆಗಳ ಮೇಲೆ ತನ್ನದೊಂದು ತರವು ಇಟ್ಟುಬಿಟ್ಟಿತು.

ಯಾರೊ ಗೊಗ್ಗರ ದನಿಯಿಂದ ಹಾಡುತ್ತಿದ್ದರು. ರೋಹಿಣಿಗೆ ಗುರ್ತು ಸಿಕ್ಕಿತು.

"ಜಂಕಾಽ—" ರೋಹಿಣಿಯು ಕೂಗಿದಳು.

"ಬಾಽಯರ್—" ಜಂಕ ದೂರಿಂದಲೆ ಪ್ರತ್ಯುತ್ತರ ಕೊಟ್ಟ. ಹತ್ತಿರ ಬಂದ ಕೂಡಲೆ "ವ್ಹೋಗಾನ್!" ಎಂದು ಕೇಳಿದ. ಅವಳು ಆತನ ಗುಡಿಸಲಿನ ದಿಕ್ಕಿಗೆ ನೋಡಿದಳು. ರಾಮುಡು ತಿರುಗಿ ಬರುತ್ತಿದ್ದ. ಆತನನ್ನು ನೋಡಿ ಜಂಕ ನಕ್ಕು, "ಸಲಾಮು ಸಾಯಬ್ರಾಂಽ—" ಎಂದು ಸಮ್ಮತಿ ಕೇಳಿದಂತೆ ಮಾಡಿದ. ರೋಹಿಣಿಯೂ ತನ್ನ ಸ್ಥಳವನ್ನು ಬಿಟ್ಟು ಎದ್ದಳು. ಜಂಕನ ನಾವು ಚಟ್ಟಿಗೆ ಹತ್ತಿತು. ರೋಹಿಣಿಯು ಒಮ್ಮೆ ರಾಮುಡುವಿನ ಕಡೆಗೆ ನೋಡಿ ನಾವಿನಲ್ಲಿ ಕುಳಿತುಕೊಂಡಳು. ಹಿಂದಿನಿಂದ ಆತನೂ ಬಂದು ಅವಳ ಹತ್ತಿರ ಕುಳಿತ. ಜಂಕ "ತುಜಾನ್ ಮಾಗಾ ಚಂದಿರವಾಳಾಽರಿಽರಿಽರಿಽ" ಎಂದು ಏನೇನೊ ಹಾಡುತ್ತ ಹಗ್ಗ ಉಚ್ಚಿದ. ನಾವು ಪ್ರವಾಹದ ಬೆನ್ನಹತ್ತಿತು.

ನದಿಯ ಮಧ್ಯಕ್ಕೆ ಬಂದಾಗ ರೋಹಿಣಿಯು ಜಲ—ಚಂದ್ರನ ಕಡೆಗೆ ಸ್ಥಿರದೃಷ್ಟಿಯಿಂದ ನೋಡುತ್ತ "ರಾಮುಡು, ನಿನಗ ಈಜಲಿಕ್ಕೆ ಬರತದಽ?"

ಎಂದು ಕೇಳಿದಳು. ರಾಮುಡು ಗಾಬರಿಯಾಗಿ "ಯಾಕ? ಬರತೇನ" ಎಂದು ಹೇಳಿ ಏನೊ ಮಾತನಾಡುವವನಿದ್ದ. ರೋಹಿಣಿಯು "ಯಾಕಿಲ್ಲ–" ಎಂದು ನಕ್ಕುಬಿಟ್ಟಳು. ದೂರದಿಂದ ಯಾರೊ ನಕ್ಕಂತೆ ಕೇಳಬಂತು. ಪ್ರತಿಧ್ವನಿಯಿದ್ದಿರಬೇಕು. ತಾಸೊತ್ತು 'ಸಫೆಲ' ಮಾಡಿ ತೀರಕ್ಕೆ ಮುಟ್ಟಿದಾಗ ಚಂದ್ರನು ಎಷ್ಟೊ ಮೇಲಕ್ಕೆ ಬಂದಿದ್ದ.

ಮನೆಗೆ ಬಂದ ಕೂಡಲೆ ರೋಹಿಣಿಯು ಹಾಸಿಗೆಯ ಮೇಲೆ ಬಿದ್ದು ಕೊಂಡಳು. ಅಲ್ಲಿಯೆ ಅವಳಿಗೆ ಗಾಢನಿದ್ರೆ ಹತ್ತಿತು. ರಾಮುಡು ಅವಳ ಹಣೆಯ ಮೇಲೆ ಕಯ್ಯಾಡಿಸಿ ನೋಡಿದ. ಕಾಯ್ದು ಬೆಂಕಿ ಆಗಿತ್ತು.

೨

ರೋಹಿಣಿಯು ರೂಪಸಂಪನ್ನೆಯಾದ ಒಬ್ಬ ಬಾಲವಿಧವೆ. ಮದುವೆಯಾದ ಒಂದು ವರ್ಷದಲ್ಲಿಯೆ ಅವಳ ಇತಿಶ್ರೀಯಾಗಿ ಹೋಗಿತ್ತು. ತಂದೆತಾಯಿಗಳು ಹೃದ್ರೋಗದಿಂದ ತೀರಿಕೊಂಡರು. ಅವಳ ಮಾವ ತನ್ನ ಮಗನ ದುಃಖದಿಂದ ಒಳಲಿ ಒಳಲಿ ಸತ್ತುಹೋದ. ಸಾಯುವಾಗ ತನ್ನ ಸೊಸೆಯ ಯೋಗಕ್ಷೇಮಕ್ಕಾಗಿ ಹತ್ತುಸಾವಿರ ರೂಪಾಯಿಗಳನ್ನು ಬ್ಯಾಂಕಿನಲ್ಲಿಟ್ಟಿದ್ದ.

ಈಗ ಅವಳ ಪಾಲಕನೆಂದರೆ ಅವಳ ಅಣ್ಣ. ಪ್ರಚಂಡ ಮೂರ್ತಿ. ಮೊದಲ ಸದ್ದಿಗೇ ರೋಹಿಣಿಯ ವಸ್ತ್ರಒಡಿವೆಗೆ ಕೈಹಾಕಿದ. ಅಲ್ಲಿ ಇಲ್ಲಿ ವ್ಯಾಪಾರದ ನೆವ ಮಾಡಿ ದುಡ್ಡು ಮುಗಿಲಿಗೆ ತೂರಿದ. ವ್ಯಾಪಾರದಲ್ಲಿ ದೈವಬಲವೂ ಬೇಕೆಂದು ಹೇಳುತ್ತಾರೆ! ಇನ್ನುಳಿಯಿತು ಬ್ಯಾಂಕಿನ ಹಣ. ರೋಹಿಣಿಯು ಪ್ರಬುದ್ಧ ವಯಸ್ಸಿಗೆ ಬಂದದ್ದರಿಂದ ಅಣ್ಣನ ಆಟ ಸಾಗ ಲಿಲ್ಲ. ಹಣದ ಒಡ್ಡಿ ಮಾತ್ರ ಎಂದೂ ರೋಹಿಣಿಯ ದೃಷ್ಟಿಗೆ ಬೀಳುತ್ತಿರ ಲಿಲ್ಲ. ಅಣ್ಣನ ಸಂಸಾರಕ್ಕೆ ತಂಗಿ ಸಹಾಯ್ಯ ಮಾಡದೆ ಮತ್ತಾರು ಮಾಡುವವರು! ಅಣ್ಣನ ಹೆಂಡತಿಯ ಕೋಶದಲ್ಲಿ ಅಥವಾ ನಾಮಾವಳಿ ಯಲ್ಲಿ ಅವಳಿಗೆ "ಪೀಡೆ" ಎಂಬ ಶಬ್ದವಿತ್ತು. ಆದರೂ ಅವಳು "ಬಂಗಾರ ಮಳೆ"ಗರೆಯುವ "ಇಂದ್ರಾಣಿ" ಅಥವಾ "ಅಲ್ಲಾದಿನನ ದೀಪ" ಎಂದಾಗಿ ಮನೆಯಲ್ಲಿದ್ದರೆ ಚಿಂತೆ ಇದ್ದಿಲ್ಲ. ಈ "ಇಂದ್ರಾಣಿ," ಈ

“ದೀಪ” ಮನೆಯ ಕಾರಭಾರದಲ್ಲಿ ಕೈಹಾಕದೆ ಮೂಲೆಯಲ್ಲಿ ಬಿದ್ದು ಕೊಂಡಿದ್ದರೆ ಯಾರು ಬೇಡೆನ್ನುವರು! ಆದರೂ ಸಣ್ಣಾಗಿ ಕಾಡುವುದು ಹೇಗೆಂಬುದು ಗೊತ್ತಿದ್ದರೆ ಯಾಕೆ ಜಡಬೇಕು!

ರಾಮು ನೆರೆಮನೆಯ ನಾರಾಯಣಪ್ಪನ ಮಗ. ರಾಮುಡು ಇದು ಆತನ ಗೆಳೆಯರಿಟ್ಟ ಪ್ರೀತಿಯ ಹೆಸರು. ಒಳ್ಳೆಯ ರಸಿಕ. ಕಾಲೇಜಿನಲ್ಲಿ ಓದುತ್ತಿದ್ದ. ರೋಹಿಣಿಯು ಆತನಿಗಿಂತ ಒಂದೆರಡು ವರ್ಷಗಳಿಂದ ಹಿರಿಯಳಾಗಿರಬಹುದಷ್ಟೆ. ಚಿಕ್ಕಂದಿನಿಂದ ಕೂಡಿದ್ದವರು. ಅವರ ನಡುವೆ ಸಂಕೋಚದ ತೆರೆ ಎಂದೂ ಇದ್ದಿಲ್ಲ.

ಮ್ಯಾಟ್ರಿಕ್ ಪರೀಕ್ಷೆ ಪಾಸಾಗುವ ವರೆಗೆ,—ಕಾಲೇಜಿನಲ್ಲಿ ಒಂದು ವರ್ಷ ಕಳೆಯುವ ವರೆಗೆ ತನ್ನಲ್ಲಾದ ವಯಸ್ಸಿಗನುರೂಪವಾದ ಬದಲು ಆತನಿಗೆ ಕಂಡುಬರಲಿಲ್ಲ. ರೋಹಿಣಿಗೆ ಎಷ್ಟೊ ವಯಸ್ಸಾಗಿದ್ದಿಲ್ಲವೆಂದು ಹೇಳಬಹುದು. ಅವಳ ವಯಸ್ಸಿನ ಗಡಿಯಾರವೆ ನಿಂತು ಹೋಗಿತ್ತೊ ಏನೊ. ಎಂದಿನಂತೆ ಅವರ ಹಾಸ-ಪರಿಹಾಸಗಳು ನಡೆದೇ ಇದ್ದವು. ರಾಮುವಿನ ಎಷ್ಟೊ ಸ್ನೇಹಿತರು ಅವಳ ಕೂಡ ನಿಃಶಂಕವಾಗಿ ಹರಟೆ ಹೊಡೆಯುತ್ತಿದ್ದರು.

ರಾಮು ಅವಳ ಜೀವದ ಗೆಳೆಯ. ಒಮ್ಮೊಮ್ಮೆ ಆತನ ಕಣ್ಣಲ್ಲಿ ಏನೊ ಒಂದು ವಿಚಿತ್ರ ಹೊಳಪು ಇಣಿಕಿ ನೋಡಿ ನೋಡಿ ಮರೆಯಾಗು ತ್ತಿತ್ತು. ರೋಹಿಣಿಯ ಮನಸಿನಲ್ಲಿ ಏನೇನೊ ವಿಕಾರ ಹುಟ್ಟಿ ಚಲ ವಿಚಲವಾಗುತ್ತಿತ್ತು.

ಅವಳ ಅಣ್ಣನಿಗೆ ಅವಳ ಹೆಸರಿಲಿದ್ದ ಹಣ ಇನ್ನೂ ಕನ್ನಡಿಯಲ್ಲಿಯ ಪ್ರತಿಬಿಂಬದಂತೆ ಕಣ್ಣಿಗೆ ಕಂಡರೂ ಕೈಗೆ ಬಾರದ್ದಾಗಿತ್ತು. ಸಾವಿರ ಹೊಂಚು ಹಾಕಿ ನೋಡಿದ. ಏನೂ ತೋಚಲಿಲ್ಲ. ಹೆಂಗಸರಲ್ಲಿಯೂ ವ್ಯವಹಾರ ಚಾತುರ್ಯವಿರುವುದಂತೆ. ಹೆಂಡತಿ ಒಂದು ವಿಚಾರ ಸೂಚಿಸಿ ದಳು. ಗಂಡನೂ ಒಪ್ಪಿದ.

ಒಂದು ದಿನ ರಾತ್ರಿಯ ಒಂಬತ್ತರ ಸಮಯಕ್ಕೆ ರಾಮುಡು ನಾಟಕ ಕ್ಕೆಂದು ಮನೆಯಿಂದ ಹೊರಟಿದ್ದ. ಗೇಟಿಗೆ ರೋಹಿಣಿಯು ನಿಂತಿದ್ದಳು.

"ರಾಮುಡು, ಬರತೀ ನನ್ನ ಸಂಗತಿ?"

"ಎಲ್ಲಿ!" ರಾಮುಡು ಆಶ್ಚರ್ಯದಿಂದ ಕೇಳಿದ.

"ನಡಿ–ಹೇಳತೇನಿ–" ಎಂದು ಆತನನ್ನು ಕೈಹಿಡಿದು ಕರಕೊಂಡು ನಡೆದಳು.

ಮರುದಿನ ರಾಮುಡು ಆಯಿತು, ರೋಹಿಣಿ ಆಯಿತು ಊರಲ್ಲಿ ಸಿಗಲಿಲ್ಲ. ರೋಹಿಣಿಯ ಅಣ್ಣ ಬ್ಯಾಂಕಿನಲ್ಲಿ ಹೋಗಿ ಕೇಳಿದ. ಹಣ ಹೋಗಿತ್ತು. ಆ ಮಾತಿಗೀಗ ಆರೆಂಟು ತಿಂಗಳುಗಳಾಗಿರಬಹುದು.

೩

ರಾಮುಡು ರೋಹಿಣಿಯರು ಊರೂರ ತಿರುಗಿ + × × ಪುರಕ್ಕೆ ಬಂದು ಮುಟ್ಟಿದ್ದರು. ರಾಮುಡುವಿಗೆ ಯಾವ ಊರಿಗೆ ಹೋದರೂ ಒಂದು ಅಂಜಿಕೆ, ಯಾರಾದರೂ ತನ್ನನ್ನು ಗುರ್ತಿಸುವರೊ ಏನೊ ಎಂದು. ಆತನ ಗುರುತಿನ ಜನರೇ ಬಹಳ! ಆತನು ಹಗಲು ಎಂದೂ ಮನೆಬಿಟ್ಟು ಹೊರಗೇ ಬರುತ್ತಿದ್ದಿಲ್ಲ. ರೋಹಿಣಿಯಂತೂ ಹೆಣ್ಣುಮಗಳು.

ರೋಹಿಣಿಯು ಮೊದಮೊದಲು ರಾಮುಡುವಿನ ಕೂಡ ವಿನೋದ ಮಾಡಿ, ಒಮ್ಮೆ ಧೈರ್ಯದ ಮಾತು ಹೇಳಿ, ಒಮ್ಮೆ ಅಸಮಂಜಸ ಪ್ರಶ್ನೆಗಳನ್ನು ಕೇಳಿ, ಆತನ ಬೆದರಿದ ಮನಸ್ಸಿಗೆ ಸಮ್ಮೋಹನದ ಮದ್ದು ಕೊಡುತ್ತಿದ್ದಳು. ಇತ್ತೀಚೆಗೆ ಅವಳ ಮನಃಸ್ಥಿತಿಯೇ ಅಸ್ಥಿರವಾದ್ದರಿಂದ ಅವಳ ಸ್ವಭಾವವೇನೇನೊ ಒಂದು ತರದ್ದಾಯಿತು. ಸಂಜೆಗೆ ನದಿಗೆ ಹೋಗಿ ಜಂಕನ ನಾವಿನಲ್ಲಿ ಕುಳಿತುಕೊಂಡು ತಾಸೆರಡು ತಾಸು ಕಳೆದರೇ ಅವಳ ಮನಸ್ಸಿಗೆ ಕೆಲದಿನ ಸಮಾಧಾನವಾಗುತ್ತಿತ್ತು. ಇತ್ತೀಚೆಗೆ ಯಾತರಿಂದ ಸಮಾಧಾನವಾಗುತ್ತಿತ್ತೊ ಅದೂ ತಿಳಿಯುವಂತಿದ್ದಿಲ್ಲ.

ಒಂದು ದಿನ ರಾಮುಡು ಅವಳನ್ನು ಸಿನೇಮಾ ನೋಡಲಿಕ್ಕೆ ಕರಕೊಂಡು ಹೋಗಬೇಕೆಂದ. ರೋಹಿಣಿಗೆ ಹಿಗ್ಗು. ಉಡಿಗೆ-ತೊಡಿಗೆಯಲ್ಲಿ ವಿಶೇಷ ಪರಿಷ್ಕಾರ ಮಾಡಿಕೊಂಡಳು. ರಾಮುಡುವಿಗೆ ಸ್ವರ್ಗದ ಬಾಗಿಲು ತೆರೆದಂತಾಯಿತು.

ಜಟಕಾದಲ್ಲಿ ಕುಳಿತುಕೊಳ್ಳುವಷ್ಟರಲ್ಲಿ ರೋಹಿಣಿಗೆ ಏನೊ ನೆನಪಾಗಿ ಮನೆಗೆ ತಿರುಗಿದಳು. ರಾಮುಡು ದಾರಿ ನೋಡಿದ. ಮನೆಯಲ್ಲಿ ಹೋಗಿ ನೋಡಬೇಕೆಂದು ಬಂದ. ರೋಹಿಣಿಯು ಹೊಸ್ತಿಲಕ್ಕೆ ಕಾಲೂರಿ ಹೊರಗಿನ ಕತ್ತಲೆಯ ಕಡೆಗೆ ಏಕದೃಷ್ಟಿಯಿಂದ ನೋಡುತ್ತ ನಿಂತಿದ್ದಳು.

" ರೋಹೀ– " ರಾಮುಡು ಹತ್ತಿರ ಬಂದು ಅವಳ ಹೆಗಲ ಮೇಲೆ ಕೈಯಿಟ್ಟ. ರೋಹಿಣಿಯು ಆತನ ಕೈ ದೂರ ಸರಿಸಿ, " ನಾ ಒಲ್ಲೆ. ನೀನು ಹೋಗತಿದ್ರ ಹೋಗು " ಎಂದು ಹೇಳಿ ಒಳಗೆ ಹೋಗಿಬಿಟ್ಟಳು. ರಾಮುಡುವಿಗೆ ಸಿಟ್ಟು ಬಂದು ಆತನು ಜಟಕಾದವನನ್ನು ಕರೆದು ಒಂದು ರೂಪಾಯಿ ಕೊಟ್ಟು ಕಳಿಸಿದ. ತನ್ನ ಟೊಪ್ಪಿಗೆಯನ್ನು ಕತ್ತಲೆಯಲ್ಲಿ ಎಲ್ಲಿಯೊ ಬೀಸಾಡಿಬಿಟ್ಟ.

ಒಳಗೆ ರೋಹಿಣಿಯು ತನ್ನ ಹಾಸಿಗೆಯ ಮೇಲೆ ಉಡಿಗೆ-ತೊಡಿಗೆಗಳನ್ನು ತೆಗೆದಿಡದೆ ಹಾಗೇ ಮಲಗಿಕೊಂಡಿದ್ದಳು. ರಾಮುಡು ಒಂದು ಖುರ್ಚಿಯ ಮೇಲೆ ಕುಳಿತು ಆ ರಾತ್ರಿ ಕಳೆದ.

೪

ಮರುದಿನ ರಾಮುಡುವಿನ ದಿನಚರಿಯಲ್ಲಿ ಬದಲಾದದ್ದು ಕಂಡು ಬಂತು. ಅಂದಿನಿಂದ ಆತನು ಕೂಡುವದೂ ಏಳುವದೂ ಮನೆಯ ಪಡಸಾಲೆಯಲ್ಲಿಯೆ ನಡೆಯಿಸಿದ. ಯಾರು ಬಂದರೂ ಹೊರಗೆ ಬಂದು ಅವರ ಎದುರಿಗೆ ನಿಂತು ಅವರನ್ನು ಚನ್ನಾಗಿ ಮಾತಾಡಿಸಿ ಕಳಿಸುತ್ತಿದ್ದ.

ಒಂದು ದಿನ ರಾತ್ರಿಯ ಊಟ ಮುಗಿದ ಮೇಲೆ ರಾಮುಡು ರೋಹಿಣಿಗೆ " ನಡಿ ನಾಟಕಕ್ಕ ಹೋಗೋದದ " ಎಂದು ಹೇಳಿದ. ಅವಳು ಒಲ್ಲೆ ಎಂದೆನ್ನುವ ಸಂಧಾನದಲ್ಲಿದ್ದಳು. ಆತನ ಮುಖಮುದ್ರೆ ನೋಡಿ ಸುಮ್ಮನಾದಳು.

ಥಿಯೇಟರಿಗೆ ಬಂದಾಗ ನಾಟಕಕ್ಕೆ ಇದೇ ಪ್ರಾರಂಭವಾಗಿರಬೇಕಷ್ಟೆ. ಆದರೂ ತಡಮಾಡಿ ಬಂದ ಈ ಇಬ್ಬರನ್ನು ನೋಡಿ ಪ್ರೇಕ್ಷಕರ ಮನಸ್ಸಿನಲ್ಲಿ ಕುತೂಹಲ ಹುಟ್ಟದೆ ಇರಲಿಲ್ಲ. ರಾಮುಡು ಮುಂದಿನ ಸಾಲಿನಲ್ಲಿದ್ದ ನಡುವಿನ ಸೋಫಾದ ಟಿಕೀಟ ತೆಗೆದಿದ್ದ.

ಥಿಯೇಟರಿನಲ್ಲಿ ಪ್ರವೇಶ ಮಾಡಿದ ಕ್ಷಣದಿಂದ ರಾಮುಡುವಿನ ದೃಷ್ಟಿ ರಂಗಭೂಮಿಯ ಕಡೆಗೆ ಹತ್ತಿತ್ತು. ರೋಹಿಣಿಯ ಮನಸ್ಥಿತಿಯು ಅಷ್ಟೇನು ಸ್ಥಿರವಾಗಿರಲಿಲ್ಲ. ಅವಳ ಮನಸ್ಸು ಒಂದು ಕ್ಷಣಕ್ಕೆ ರಂಗ ಸ್ಥಳದ ಮೇಲೆ ನಡೆದ ಪ್ರಸಂಗದಲ್ಲಿ ಸುಮಧುರಸವಾಗುತ್ತಿತ್ತು, ಮತ್ತೊಂದು ಕ್ಷಣಕ್ಕೆ ರಾಮುಡುವಿನ ಅಂತರಂಗವನ್ನು ಹುಡುಕತೊಡಗುತ್ತಿತ್ತು. ಎಷ್ಟೋ ಸಲ ಅವಳು ಓರೆಗಣ್ಣಿನಿಂದ ಆತನ ಮೋರೆಯ ಕಡೆಗೆ ನೋಡಿದಳು. ಅಲ್ಲಿ ಏನೊ ಒಂದು ವಿಕಾರ ಒಡಮೂಡಿತ್ತು. ಅದನ್ನು ನೋಡಿ ಅವಳ ಹೃದಯವು ನಡುಗಿತು.

ನಾಟಕ ಮುಗಿದದ್ದು ಇಬ್ಬರಿಗೂ ತಿಳಿಯಲಿಲ್ಲ. ಕಥಾಂಶವಾದರೂ ತಿಳಿದು ಬಂತೊ ಇಲ್ಲವೊ!

ಥಿಯೇಟರಿನ ಹೊರಗೆ ಒಂದು ರಾಮುಡು ಒಂದು ಜಟಕಾ ಬಂಡಿಯನ್ನು ಗೊತ್ತುಮಾಡಿದ. ರೋಹಿಣಿಯು "ಊಂ-ಹೂಂ, ನಡಕೋತ ಹೋಗೋಣ" ಎಂದು ಮುಂದೆ ಸಾಗಿದಳು. ರಾಮುಡು ಬಂಡಿಯ ವಿಚಾರವನ್ನೆಲ್ಲ ಬಿಟ್ಟುಕೊಟ್ಟು ಅವಳ ಹಿಂದಿನಿಂದ ನಡೆದ. ಅವಳ ಮುಖದ ಮೇಲೆ ಒಂದು ಸೂಕ್ಷ್ಮ ಹಾಸ್ಯರೇಖೆ ಮೂಡಿ ಮರೆಯಾಯಿತು.

೫

ರಾಮುಡುವಿನ ಈ ಮುಂದಿನ ಚರಿತ್ರವೆಂದರೊಂದು ಸ್ವೈರಾಚಾರ ಕಾಂಡ. ಅಭಕ್ಷ್ಯ-ಭಕ್ಷಣ, ಅಪೇಯ-ಪಾನ ಇವೆರಡೂ ಅವಿಚ್ಛಿನ್ನವಾಗಿ ನಡೆದವು. ಹಗಲೆಲ್ಲ ಓಣಿಗಳೇನೂ ಉಳಿಯಲಿಲ್ಲ. ರಾತ್ರಿ ಪಶುವಿಗಿಂತ ಪಶು. ಹೊಡೆಯುವುದೂ, ಬಡೆಯುವುದೂ ಇನ್ನೂ ಅನೇಕ ಅತ್ಯಾಚಾರಗಳು ರೋಹಿಣಿಗೆ ಅತಿ ಪರಿಚಯದ ಮಾತುಗಳಾಗಿದ್ದವು. ನಿರಂತರ ಸಂಶಯದ ಗುರಿಯನ್ನೊಂದಿಟ್ಟರೆ ಕಲ್ಪನೆಯ ಬಾಣಗಳು ಅಲ್ಲಿಯೆ ಹೋಗಿ ತಟ್ಟುತ್ತವೆ. ಇತ್ತ ರೋಹಿಣಿಯಾದರೂ ತನ್ನ ಬಾಯಿ ಹರಿಬಿಟ್ಟಿದ್ದಳು. ಒಂದಕ್ಕೆ ಹತ್ತು ಮಾತು.

ಒಮ್ಮೆ ಏನೊ ಎದುರುತ್ತರ ಕೊಟ್ಟದ್ದಕ್ಕಾಗಿ ರಾಮುಡು ಅವಳ

ಕೈಗೆ ಚಾಕೂರಿಯಿಂದ ಹೊಡೆದ. ಅವಳು ಆ ಬಿಸಿ ಬಿಸಿ ರಕ್ತದ ಪ್ರವಾಹ ವನ್ನು ನಿಲ್ಲಿಸದೇ ಆದರ ಕಡೆಗೆ ನಿಶ್ಚಲ ದೃಷ್ಟಿಯಿಂದ ನೋಡುತ್ತ ನಿಂತು ಕೊಂಡಿದ್ದಳು.

೬

ಮಧ್ಯಾಹ್ನದ ಊಟ ಮುಗಿದಿತ್ತು. ರಾಮುಡು ರೋಹಿಣಿ ಮಾತಾಡುತ್ತ ಕುಳಿತಿದ್ದರು. ಅಷ್ಟರಲ್ಲಿ ಮನೆಯ ಮುಂದೆ ಒಂದು ಜಟಕಾ ಬಂದು ನಿಂತಿತು. ಮೋರೆ ಎತ್ತಿ ನೋಡುವಷ್ಟರಲ್ಲಿ ಒಳಗೆ ಯಾರೊ ಬಂದೇಬಿಟ್ಟರು. ರಾಮುಡು ಬೆಪ್ಪನಾಗಿ "ವಾಸು!" ಎಂದು ಭಿರಿಭಿರಿ ನೋಡುತ್ತ ನಿಂತ. ರೋಹಿಣಿಗೆ ಗುರುತು ಹತ್ತಲಿಲ್ಲ. ಆದರೂ ಎಂದೊ ನೋಡಿರಬೇಕೆಂದೆನಿಸಿತು.

"ರಾಮಾ, ನಡಿ ಇನ್ನ. ಅಲ್ಲೆ ನಾನಣ್ಣಾಗ ಒಡ್ಯಾಗೇದ, ನಡಿ. ಸಾಕಿನ್ನ ನಿನ್ನ ವಿಚಾರ." ರಾಮುಡು ಹಾಗೇ ನಿಂತ. "ಹಂ– ಕೃಷ್ಣ ಬಂದಾನ ಬರತಾನ ನಿನ್ನ ಸಂಗತಿ—". ಆ ದನಿಯಲ್ಲಿ ಅಧಿಕಾರದ ದರ್ಪವಿತ್ತು. ರಾಮುಡು ಅತ್ತಿತ್ತ ನೋಡಹತ್ತಿದ.

ಕೃಷ್ಣ ಬಂದ. ರಾಮುಡುವಿನ ಸಾಮಾನು ಬಂಡಿಯಲ್ಲಿ ಏರಿಸಿದ. ರಾಮುಡು ಕರುಣದೃಷ್ಟಿಯಿಂದ ನೋಡುತ್ತ ಆತನ ಬೆನ್ನುಹತ್ತಿ ಹೋದ.

೭

ವಾಸು ಖುರ್ಚಿಯ ಮೇಲೆ ಕುಳಿತಿದ್ದ. ರೋಹಿಣಿಯು ತಲೆ ತಗ್ಗಿಸಿ ನಿಂತಿದ್ದಳು.

"ನೀ ಹಿಂಗ ಯಾಕ ಮಾಡಿದಿ?"

ರೋಹಿಣಿಗೆ ಅನಂತ ಯಾತನೆಗಳಾಗಹತ್ತಿದವು. ದುಃಖಾವೇಗವು ಏರಿಏರಿ ಬಿರುಗಾಳಿಗೆದುರಾದ ಘುರದಂತೆ ಹೊಯ್ದಾಡಿ ಆತನ ಕಾಲಿಗೆ ಬಿದ್ದು ಬಿಕ್ಕಿಬಿಕ್ಕಿ ಅಳಹತ್ತಿದಳು. ಅವಳ ದೇಹವೆಲ್ಲ ನಡುಗಿ ನಡುಗಿ ಒಳಗಿನ ಅಸ್ಥಿಪಂಜರ ಮುರಿದು ಬೀಳುವದೊ ಏನೊ ಎಂದೆನಿಸಿತು

ವಾಸು ಅವಳನ್ನೆತ್ತಿ, ಅವಳ ತಲೆಯನ್ನು ತನ್ನ ತೊಡೆಯ ಮೇಲಿಟ್ಟು ಕೊಂಡು ಬೆನ್ನಮೇಲೆ ಕೈಯಾಡಿಸಿದ. ಬಿಕ್ಕುವದು ಕಡಿಮೆಯಾಗುತ್ತ ನಿಶ್ಚಲತೆ ಬರಹತ್ತಿತು. ಎಷ್ಟೋ ಹೊತ್ತಿನ ವರೆಗೆ ಅವಳು ಗಾಢನಿದ್ರೆ ಹತ್ತಿದಂತೆ ಹಾಗೇ ಬಿದ್ದುಕೊಂಡಿದ್ದಳು. ಆತನ ಕಣ್ಣುಗಳಿಂದ ಮಾತ್ರ ನೀರು ಧಾರೆಯಾಗಿ ನಡೆದೇ ಇತ್ತು.

* * * * * * *

ಈಗ ರೋಹಿಣಿಯು ಒಂದು ಅನಾಥಾಲಯದಲ್ಲಿ ಪರಿಚಾರಿಕೆ ಯಾಗಿ ಕೆಲಸ ಮಾಡುತ್ತಿರುವಳು.

# ಗಾಯ ಹೊಂದಿದ ಹಕ್ಕಿ ++ ++ ++

ಈಗ ನಾಲ್ಕು ದಿನಗಳಿಂದ ನಮ್ಮ ಓಣಿಯೊಳಗೆ ಒಂದೇ ಚರ್ಚೆ ನಡೆದಿತ್ತು. ನಮ್ಮ ಮನೆಯ ಬಾನಗಿತ್ತಿ ಭೀಮವ್ವ ಓಡಿ ಹೋಗಿದ್ದಳು. ಆಕೆ ಹೋದರೆ ಇನ್ನೊಬ್ಬಾಕೆ. ಕೆಲಸವೇನೂ ನಿಲ್ಲಲಿಲ್ಲ. ಆದರೂ ಭೀಮವ್ವ ಹೋದದ್ದೆ ಮಹಾ ಆಶ್ಚರ್ಯ. ಹಾಗೆ ನೋಡಿದರೆ ಆಕೆಯ ವಯಸ್ಸು ನಾಲ್ವತ್ತಕ್ಕೆ ಸಮೀಪಿಸಿತ್ತು. ನೋಡಲಿಕ್ಕೂ ಏನು ಚೆಂದ ಹೆಣ್ಣಲ್ಲ. ನಗು ಬರುವ ಮಾತೆ ಆದದ್ದು ಮಾತ್ರ ನಿಜ.

ಆಕೆ ಈಗ ನಾಲ್ಕೈದು ವರ್ಷಗಳಿಂದ ನಮ್ಮಲ್ಲಿ ಕೆಲಸ ಮಾಡುತ್ತಿದ್ದಳು. ಮಕ್ಕಳಿದ್ದಿಲ್ಲ. ಆದೊಂದು ಪೆದ್ದಗಂಡ. ಹೆಂಡತಿಯ ಬೆನ್ನು ಬೆನ್ನು ಹತ್ತಿ ತಿರುಗುತ್ತಿತ್ತು. ಕೆಲಸವಿಲ್ಲ ಬೊಗಸೆಯಿಲ್ಲ. ಆಕೆ ಕೆಲಸ ಮಾಡುತ್ತಿರುವ ಮನೆಗಳಿಗೆ ಆಕೆಯ ಜೊತೆಗೆ ಹೋಗಿ ಮನೆಯವರು ಆಕೆಗಾಗಿ ಮುಚ್ಚಿಟ್ಟ ಅನ್ನದಲ್ಲಿ ಪಾಲುಗೂಡಿ ಬಾಳುವೆ ಮಾಡುತಿತ್ತು ಸೈ. ನಾಯಿಯ ಬಾಳುವೆ. ಆಕೆಗೆ ಗಂಡನೆಂದು ಹೇಳಿಕೊಳ್ಳಲಿಕ್ಕೂ ನಾಚಿಕೆ. ಛಿಡಿಸ್ ಫಿಡಿಸ್ ಮಾಡುತ್ತಿದ್ದಳು. ಅಸಹ್ಯಿಸಿಕೊಳ್ಳುತ್ತಿದ್ದಳು. ಬೈಯುತ್ತಿದ್ದಳು. ಆ ಪ್ರಾಣಿಗೇನು ಖಬರಿರಲಿಲ್ಲ. ತಿಳಿವಳಿಕೆಯೆ ಇರಲಿಲ್ಲವೆನ್ನಿರಿ.

ನಮ್ಮ ರಾಣೀಸಾಹೇಬರಿಗೆ ಭೀಮವ್ವಾ ಎಲ್ಲಿಂದ ಸಿಕ್ಕಳೊ-ಆಕೆ

ಯೆಂದರೆ ಅವರ ಜೀವದ ಗೆಳತಿಯೆ ಆಗಿದ್ದಳು. ಮನೆಯಲ್ಲಿ ಏನಾದರೂ ವಿಶೇಷವಿದ್ದರೆ ಭೀಮವ್ವನಿಗೆ ಬಡಿಸಿಕೊಡುವುದಲ್ಲದೆ ಕೂಡಿಸಿ ಊಟಕ್ಕೆ ಹಾಕುತ್ತಿದ್ದರು. ಹಳೆಯ ಸೀರೆಗಳಿಗೆ ಈಗ ಸಣ್ಣಪುಟ್ಟ ಭಾಂಡಿ ಮುಸರಿಯ ಸಾಮಾನುಗಳು ಬರುತ್ತಿದ್ದಿಲ್ಲವೊ ಏನೊ—ಭೀಮವ್ವನ ಮೈಮೇಲೆ ಆ ಸೀರೆಗಳು ಕಾಣುತ್ತಿದ್ದವು. ಭಾಂಡಿ ಮಾರುವ ಮಣಿಗಾರರು ಛಿದ್ರ ಕೋರಿಯಾದ ಸೀರೆಗೆ 'ಏನೈತೆ ಇದರಾಗ ಬಾಯಿಸಾಬ—ಸೀರೆ ಹರದೈತೆ' ಎಂದರೆ ಮೂಗ ಮುರಿಯುವ ನಮ್ಮ ರಾಣೀಸಾಹೇಬರು ಇನ್ನೂ ಗಟ್ಟಿಯಿದ್ದ ಸೀರೆಗೆ "ಬಾಯಾರ, ಹಳೇದಾತು ಈ ಸೀರಿನ್ನ—" ಎಂದು ಭೀಮವ್ವಾ ಹೆಸರಿಟ್ಟರೆ ಸುಮ್ಮನಿರುತ್ತಿದ್ದರಷ್ಟೆ ಅಲ್ಲ ಆಕೆಗದನ್ನು ದಾನ ಮಾಡಿಬಿಡುತ್ತಿದ್ದರು.

ಭೀಮವ್ವಾ ನಮ್ಮ ಪುಟ್ಟೂನ ಮೇಲಂತೂ ಜೀವಪ್ರಾಣ. ಆತ ಹುಟ್ಟಿದಂದಿನಿಂದ ಆತನನ್ನು "ಗಂಡ ಗಂಡ" ಎಂದು ಕರೆಯುತ್ತಿದ್ದಳು. "ನೀನs ನೋಡು ನನ್ನ ಗಂಡ, ನನ್ನ ಹಡದಪ್ಪಾ. ಎಲ್ಲೆ ಕುಂತಿತ್ತೊ ಆ ಖೋಡಿ—ಯಾ ಹಡದಪ್ಪಾ ಹಡದಿಟ್ಟಿದ್ದೊ ನನ್ನ ಪಾಲಿಗೆ" ಎಂದು ಪುಟ್ಟೂನನ್ನು ಆಡಿಸುವಾಗ ಆಕೆಯೆನ್ನುತ್ತಿದ್ದಳು. ನಮ್ಮ ರಾಣೀಸಾಹೇಬರು ತಮ್ಮ ಈ "ಸೊಸೆ"ಯ ಹಿಂದಿನ ಆ "ಗಂಡ"ನ ಕಾಟವನ್ನು ತಪ್ಪಿಸಲಿಕ್ಕೆ ಒಳ್ಳೆ ಹುರುಪುಗೊಂಡು ಸಹಾಯಕರಾಗುತ್ತಿದ್ದರು. ಒಮ್ಮೆ ಭೀಮವ್ವನನ್ನು ಕೋಣೆಯಲ್ಲಿ ಅಡಗಿಸಿಟ್ಟು ಆಕೆಯ ಗಂಡನನ್ನು ಹೊರಗೆ ಹಾಕಿಸಿದ್ದರು. ಭೀಮವ್ವ ಓಡಿಹೋದದ್ದು ನಿಶ್ಚಿತವಾಯಿತು. ಓಡಿ ಹೋದವಳು ತಿರುಗಿ ಯಾಕೆ ಬರುತ್ತಾಳೆ? ತಿರುಗಿ ಬರಲಿಕ್ಕೆ ಆಕೆಗೇ ಹಿಂದೆ ಮಕ್ಕಳ ಬಂಧನವಿಲ್ಲ. ಆದರೂ ಆಕೆಗೆ ಆ ಇಳಿವಯಸ್ಸಿನಲ್ಲಿ 'ರೋಮಾನ್ಸ' ನೆನಪಾದದ್ದು ನೋಡಿ ನನಗೆ ನಗು ಬರುತ್ತಿತ್ತು. ನಮ್ಮ ರಾಣೀಸಾಹೇಬರು ಆಕೆಯ ಮಾತು ಹೊರಟ ಕೂಡಲೆ ಕಿಟ್ಟದ ಗೊಂಬೆಯಂತೆ ಭಾವನಾಶೂನ್ಯ ದೃಷ್ಟಿಯಿಂದ ನೋಡತೊಡಗುತ್ತಿದ್ದರು. ಅವರನ್ನು ರೇಗಿಸಲಿಕ್ಕೆ ನನಗೊಂದು ಹೊಸ ವಿಷಯ ಸಿಕ್ಕಂತಾಯಿತು.

* * * * * * *

ರಾಣೀಸಾಹೇಬರು ಆಗ ಎರಡು ದಿನ ಒಳ್ಳೆಯ ಆರ್ಜವವನ್ನು ತೋರಿಸತೊಡಗಿದ್ದರು. ಏನೊ ಬೇಕಾಗಿದೆ—ಏನೊ ಖರ್ಚಿನ ವಿಷಯ—ಏನೊ ನಮ್ಮ ಜೇಬಿನ ತಳಕ್ಕೆ ಕತ್ತರಿಯ ಪ್ರಯೋಗವಿದ್ದೀತೆಂದು ನಿರ್ಧರಿಸಿಕೊಂಡು ಸುಮ್ಮನಾದೆ. ನಮ್ಮ ನಡುಮನೆಯ ಕೋಣೆಯಲ್ಲಿ ಯಾರೊ ಉಳಿದುಕೊಂಡಿರುವರೊ ಏನೊ ಎಂದು ನನಗೆ ಸಂಶಯ ಬಂದಿತು. ಎರಡು ದಿನಗಳ ವರೆಗೆ ಯಾತರ ಸುಳುವೂ ಹತ್ತಲಿಲ್ಲ. ನಾನು ಒಮ್ಮೆ ಮುಂಜಾನೆ ಚಹಾ ಕುಡಿಯುತ್ತ ಕೂತಿದ್ದೆ. ಯಾರೊ ನಡುಮನೆಯ ಬಾಗಿಲ ತೆರೆದು ಹೊರಬಿದ್ದರು. ನೋಡಿದೆ—ಭೀಮವ್ವ!

* * * * * * *

ಭೀಮವ್ವ ನಮ್ಮ ಓಣಿಯ ಸಾಮಾಜಿಕ ಜೀವನದಲ್ಲಿ ಬೆರೆತುಕೊಂಡಳು. ಆಕೆ ಓಡಿಹೋಗಿದ್ದಳೆಂಬುದನ್ನು ಎಲ್ಲರೂ ಮರೆತರು. ಮೊದಲಿನಂತೆ ಆಕೆ ನಮ್ಮಲ್ಲಿ ಕೆಲಸಕ್ಕೆ ಹತ್ತಿದಳು. ನನಗೆ ಮಾತ್ರ ಈಗೊಂದು ಮಾತು ತಿಳಿಯದಾಯಿತು. ಈಗ ಆಕೆ ತಾನೇ ಜೊತೆಗೆ ತನ್ನ ಗಂಡನನ್ನು ಕರಕೊಂಡು ಬರುತ್ತಿದ್ದಳು. ಆತನಿಗೆ ತಿನಿಸು-ಉಣಿಸುಗಳಲ್ಲಿ ಕಡಿಮೆಯಾಗಗೊಡುತ್ತಿದ್ದಿಲ್ಲ.

ಒಂದು ದಿನ ಹಿತ್ತಲಲ್ಲಿ ತುಲಸಿ ದಳಗಳನ್ನು ಹರಿಯುತ್ತಿದ್ದೆ. ಭೀಮವ್ವ ಆಕೆಯ ಗಂಡ ಭಾಂಡಿ ತಿಕ್ಕುತ್ತಿದ್ದರು. ಏನೊ ಕಾರಣದಿಂದ ಭೀಮವ್ವ ಒಳಗೆ ನಡೆದಿದ್ದಳು. ನಾನು ಆಕೆಯನ್ನು ಸಹಜವಾಗಿ ಮಾತನಾಡಿಸಿದಂತೆ ಕೇಳಿದೆ. "ಯಾಕ ಭೀಮವ್ವಾ, ಹೋದ್ಯಾಕ ತಿರುಗಿ ಬಂದ್ಯಾಕ ಏನೂ ತಿಳೀಲಿಲ್ಲ ನೋಡು ನಮಗ!" ಆಕೆ ತತ್ತರಿಸಿದಳು. ಆದರೂ ನನ್ನ ದನಿಯಲ್ಲಿಯ ಆಶ್ವಾಸನದಿಂದ ಆಕೆಯ ಮನಸು ಸ್ವಸ್ಥವಾಯಿತು.

"ಅದ್ಯಲ್ಲಾ ಏನ್ಹೇಳ್ಲಿ ಅಣ್ಣಾವ್ರ—ಈ ಮಾರಾಯನ ಕಾಟಾ ತಪ್ಪಸಾಕ ಮಾನಾ ಮರೇದಿ ಬಿಟ್ಟ ಓಡಿಹೋದ್ನಿ—ನಾನೂ ಒಬ್ಬನ ಮನಿ ಹೊಕ್ಕಿದ್ನಿ-ಅದೆಂಥಾ ಪಿಶೀನ್ರಿ-ದುಡ್ಯಾಣೆಲ್ಲಾ ಬರೆ ಕುಡ್ಯಾಣ ಕುಡ್ಯಾಣ—ಮನ್ಯಾಗ ಹ್ಯಾಣ್ತಿದ್ಲಿರಿ—ಆಕಿನೂ ಗರ್ತಿಗಂಗಾ ದೇವತಿ ನೋಡ್ರಿ-

ಸತ್ತ ಸುಣ್ಣಾಕ್ಕಿದ್ಲು ಆತನ ಕಾಲಾಗ—ದುಡದು ತರತಿದ್ಲು—ನಾನೂ ದುಡದ್ನಿ—ಆ ಬಾಗ್ಯಕ್ಕ ಹೊರಗ ಒಬ್ಬಾಕಿನ್ನ ಇಟ್ಟಿದ್ನಂತ್ರಿ—ಆಕಿ ಹ್ಯಾಣ್ತಿ ಪಿಟ್ ಅಂತಿದ್ದಿಲ್ಲ—ಹೊಡೀತಿತ್ತು ಬಡೀತಿತ್ತು—ಹಾಗ ಸುಮಾ ಕಿರತಿದ್ಲು—ನನಗೂ ಹೊಡ್ಯಾಕ ಒಂದಿದ್ದ—ಕೈ ಹಿಡದ್ನಿ—ನನಗ ಸರಿ ಬರಾಣಿಲ್ಲ ಇದೆಲ್ಲಾ—ಚೀ ಏಳು ಮುಂಗಾ ಅಂದು ಎದ್ದು ಬಂದುಬಿಟ್ನಿ." ಆ ಮೇಲೆ ತನ್ನ ಗಂಡನ ಕಡೆಗೆ ನೋಡಿ ಮುಗುಳ್ನಗೆ ನಕ್ಕು "ಇವನೂ ಹೊರಗಿನವ ಅಲ್ರಿ—ನಮ್ಮ ಚಿಗವ್ವನ ಅಣ್ಣಾನ ಮಗ—ನಾ ಇನ್ನೂ ಈಟ ಇದ್ನಿರಿ ಲಗ್ಗಣದಾಗ—ನಾವೂ ಕೂಡಿ ಆಡಿದವರ್ರಿ— ".

ಅಷ್ಟರಲ್ಲಿ ನಮ್ಮ ಪುಟ್ಟು ಬಂದು ಆಕೆಯನ್ನು ಎರಡೇಟು ಹೊಡ ಕೊಂಡು ಓಡುತ್ತಿದ್ದ. ಆಕೆ ಆತನ ಕೈ ಗಟ್ಟಿಯಾಗಿ ಹಿಡಿದು "ಬಾರೊ ಬಾ. ಎಲ್ಲೆ ಹೋಕ್ಕಿ ನನ ಗಂಡಾ—ಇವನ್ನ ಬಿಟ್ಟು ನಾ ಹೋಗೇನ್ರಿ ಎಲ್ಲ್ಯಾರ ಜಲಮಿರೂತಂಕಾ" ಎಂದು ಮುತ್ತಿಟ್ಟಳು. ಆಕೆ ಕಣ್ಣೊರಿಸಿ ಕೊಂಡಳೋ ಏನೊ ನನಗೂ ಸಂಶಯ. ಪುಟ್ಟುನನ್ನು ಮಾತ್ರ ಎತ್ತಿ ಕೊಂಡು ಒಳಗೆ ನಡೆದಳು.

ನಾನು ತಲೆ ಎತ್ತಿ ನೋಡಿದೆ. ಭೀಮವ್ವನ ಗಂಡ ತಲೆ ತಗ್ಗಿಸಿ ಭಾಂಡಿ ಬೆಳಗುತ್ತ ಕೂತಿದ್ದ.

# ಪ್ರಿಯತಮ

ವೃದ್ಧ ತಪಸ್ವಿಯು ಎದುರಿಗೀಗೊಂಡು ತಾಡಾವಲಿಯನ್ನಿಟ್ಟುಕೊಂಡು ಏನೊ ಒಂದು ಗಣನೆಯಲ್ಲಿ ತೊಡಗಿದ್ದ. ಅಂಕಿಗಳ ಸಾಲುಗಳು ಬೆಳೆಯುತ್ತ ನಡೆದಿದ್ದವು. ಮೋರೆಯ ಮೇಲಿನ ವಿಷಾದದ ಛಾಯೆ ಕ್ಷಣಕ್ಷಣಕ್ಕೆ ದಟ್ಟವಾಗುತ್ತ ನಡೆಯಿತು. ಕೊನೆಗೊಮ್ಮೆ ದೀರ್ಘವಾಗಿ ನಿಟ್ಟುಸಿರು ಬಿಟ್ಟ. ತಂದ್ರೆಯ ಜಾವವು ಇನ್ನೂ ಹರವಾಗಿದ್ದಿಲ್ಲ.

"ವತ್ಸೇ,——"

"ಗುರುದೇವ,——" ವೀಣೆಯ ಝುಂಕಾರವಾಯಿತು. ಈ ವರೆಗೆ ಮೆಟ್ಟಿಲಾಚೆಗೆ ತಡೆದು ನಿಂತ ಉಷಾದೇವಿಯೊಬ್ಬಳು ಅಧೋಮುಖಿಯಾಗಿ ಬಂದು ನಿಂತಳು.

"ವತ್ಸೇ, ನಾನು ಗಣಿತ ಮಾಡಿ ನೋಡಿದೆ. ನೀನು ಕೇಳಿದ ಪ್ರಶ್ನೆಗಂತೂ ಉತ್ತರ ಸಿಗಲಿಲ್ಲ. ಅವನ್ತಿ ರಾಜಕುಮಾರನ ಜೀವಿತಕ್ಕೇನೂ ಅಪಾಯವಿಲ್ಲ. ಸದ್ಯಕ್ಕೆ ಆತನ ಮೇಲೆ ಬಂದ ಸಂಕಟಪರಂಪರೆಯ ಕಲ್ಪನೆ ನನಗಂತೂ ಮೀರಿದ್ದಾಗಿದೆ. ರಾಜನಂದಿನಿ, ಜಗತ್ತು ವಿಸ್ತೀರ್ಣವಿರುವದು. ನಿನಗೆ ಅನುರೂಪರಾದ ರಾಜಕುಮಾರರದೂ ಕೊರತೆಯಿಲ್ಲ. ಆ ಉಳಿದ ಯಾರನ್ನಾದರೂ ವರಿಸು."

"ಗುರುದೇವ, ನನ್ನ ಆಶೆಯು ನೌಕೆಯೇ ನನ್ನನ್ನು ಯಾವದಾದ ರೊಂದು ತೀರಕ್ಕೆ ಮುಟ್ಟಿಸಬಹುದು."

ಅವಳ ಮುಖದ ಮೇಲೆ ನಿಶ್ಚಯದ ನಿಷ್ಠುರತೆ ಒಡಮೂಡಿತು. ತಪಸ್ವಿಯು ಏನೂ ಮಾತಾಡಲಿಲ್ಲ. ಮನಸ್ಸಿನಲ್ಲಿ ಬಲು ನೊಂದುಕೊಂಡ. ತುಸು ಹೊತ್ತಿನಲ್ಲಿ ಅವಳು ಆಗಿನ ಆ ಭೆಟ್ಟಿಯ ಪ್ರಯೋಜನ ಮುಗಿಯಿ ತೆಂದು ಸೂಚಿಸಿ ಆತನ ಅನುಜ್ಞೆ ಪಡೆದುಕೊಂಡು ಆಶ್ರಮದಿಂದ ಹೊರ ಬಿದ್ದಳು.

ಹೊರಗೆ ಮತ್ತೊಬ್ಬಳು ಅವಳ ದಾರಿ ಕಾಯುತ್ತ ನಿಂತಿದ್ದಳು. ಅವಳು ಆತುರತೆಯಿಂದ ಕೇಳಿದಳು "ಏನಾಯಿತು?"

"ಜಗತ್ತು ವಿಸ್ತೀರ್ಣವಿರುವದು! ರಾಜಕುಮಾರರ ಕೊರತೆ ಯಿಲ್ಲ!" ಎಂದು ಮೊದಲಿನವಳು ಶುಷ್ಕವಾಗಿ ನಕ್ಕಳು. ಆ ನಗೆಯು ಸುತ್ತಲಿನ ಕತ್ತಲೆಯಲ್ಲಿ ಕೂಡಿಕೊಂಡಿತು. ಅವಳ ಅಂತರಂಗದಲ್ಲಿ ಮುಸುಕಿದ ಕತ್ತಲೆಯ ಪ್ರತಿಧ್ವನಿಯು ಆ ಮತ್ತೊಬ್ಬಳಿಗೆ ಕೇಳಬರಲಿಲ್ಲ.

* * * * * * *

ಶಿಷ್ಟಾಗಮನೇ ಅನಧ್ಯಾಯಃ. ಅನಧ್ಯಾಯ, ಗೋವತೀ ತೀರದ ಮೇಲಿನ ಒಂದು ಆಶ್ರಮದಲ್ಲಿ. ಶಿಷ್ಟ, ಆ ದಿನ ಅಕಸ್ಮಾತ್ತಾಗಿ ಆಶ್ರಮ ದಲ್ಲಿ ಅವತರಿಸಿದ ಒಬ್ಬ ಹುಚ್ಚ. ಬಟುಗಳಿಗೆ ತಮ್ಮ ನಿರಾಗಸ ಕ್ರೀಡೆಯ ಉನ್ಮಾದ. ಆತನಿಗೇತರದೊ! ಆತನ ಮುಖದ ಮೇಲೆ ಒಂದು ಎಂದೂ ಅಳಿಯದ ಸ್ಮಿತ.

ಬಟುಗಳು ಆತನಿಗೆ ಧೂಲಿಯಿಂದ ಅಭ್ಯಂಗಸ್ನಾನ ಮಾಡಿಸಿ ಆತ ನನ್ನು ಒಂದು ಶಿಲಾಖಂಡದ ಮೇಲೆ ಕೂಡಿಸಿ ಎಲೆಬಳ್ಳಿಗಳಿಂದ ಆತನ ಸರ್ವಾಂಗವನ್ನೆಲ್ಲ ಮುಚ್ಚಿ ಚೀತ್ಕಾರದ ಜಯಭೇರಿ ಹೊಡೆದರು. ಆ ನಿನಾದವು ದಿಗಂತದಲ್ಲಿ ಹಬ್ಬಿತು. ಸ್ಮಿತಕ್ಕೆ ಒಂದು ಪುಟವೇರಿತು. ಅಷ್ಟ ರಲ್ಲಿ ಎಲ್ಲಿಂದಲೊ ಒಂದು ಭಯಾನಕ ಹಾಸ್ಯದ ಝುಂಝಾವಾತವು ಅವರ ಕಿವಿಗೆ ಒಂದು ತಟ್ಟಿತು. ಎಲ್ಲರೂ ಭಯಚಕಿತರಾಗಿ ಅತ್ತಿತ್ತ ನೋಡ ಹತ್ತಿದರು.

ಒಬ್ಬ ಭೀಷಣಾಕಾರ ಉನ್ಮಾದಿನಿಯು ಅವರಿದ್ದೆಡೆಗೇ ಬರಹತ್ತಿದ್ದಳು. ಅವಳ ಕೇಶಪಾಶವು ಸ್ವೈರವಾಗಿ ಹಾರಾಡುತ್ತಿತ್ತು. ಮೈಮೇಲೆ ಜೀರ್ಣ ವಸ್ತ್ರಗಳದೊಂದು ಪರ್ವತವೇ ಒಟ್ಟಿತ್ತು. ಅವಳು ಬಾಲಿಕೆ ಇರಬಹುದು, ತರುಣಿಯೂ ಇರಬಹುದು. ನೋಡುವವರು ಮಾತ್ರ ಅವಳ ಗೋಜಿಗೇ ಹೋಗುವಂತಿದ್ದಿಲ್ಲ. ಈಗವಳೊಂದು ಗೀತವನ್ನು ಹಾಡುವದರಲ್ಲಿ ಮಗ್ನಳಾಗಿದ್ದಳು.

"ಕಥಯ ಹೇ ನಾಥ ! ಸಂಪ್ರತಿ
ಪ್ರಾಪ್ನುಯಾಂ ಕಥಂ ತ್ವಯಿ ಸ್ಥಿತಿಂ"
"ಮಲ್ಲಿಕಾ — ಸ್ನೇಹ — ಪಂಜರೇ
ವಿಧ್ಧಿ ಮಾಂ ವಿದ್ಧಕೇಸರಂ-
ಭೀರು ! ಸಾ ತ್ವದೀಯ ರೂಪತಾ
ಮಾಧತ್ತೇ — ತ್ವಂ ತದೀಯತಾ !"

ಗೀತದ ಅರ್ಥವಾರಿಗೆ ಬೇಕು ! ಎಲ್ಲರೂ ಆ ಮಧುಸಂಗೀತದಲ್ಲಿ ಮೈಮರೆತರು. ಹಾಡುತ್ತ ಹಾಡುತ್ತ ಉನ್ಮಾದಿನಿಯು ಕುಣಿಯತೊಡಗಿದಳು. ಪ್ರಲಯ ತಾಂಡವದಲ್ಲಿ ಕೂಡ ಸಂಮೋಹನದ ಸೆಳವಿರುವದಂತೆ. ಹುಚ್ಚ ನಂತೂ ಏಕದೃಷ್ಟಿಯಿಂದ ಅವಳ ಕಡೆಗೇ ನೋಡಹತ್ತಿದ್ದ. ಅವಳು ಹೆಜ್ಜೆಯಿಡುತ್ತ ಒಬ್ಬೊಬ್ಬರ ಹತ್ತರ ಹೋದಂತೆ ಮಾಡಿದಳು. ಬಟುಗಳು ದೂರ ಸರಿದರು. ಅದೇ ಆವೇಶದಲ್ಲಿ ಅವಳು ಹುಚ್ಚನನ್ನು ಕೈಹಿಡಿದೆಬ್ಬಿಸಿ ಆತನನ್ನು ತನ್ನ ಸಂಗಡ ಕರೆದೊಯ್ದು ಮಾಯವಾದದ್ದು ಅವರಿಗೆ ಎಷ್ಟೋ ಹೊತ್ತಿನ ಮೇಲೆ ಗೊತ್ತಾಯಿತು. ಪಾಪ, ಅವರಿನ್ನೂ ಆ ಸ್ವಪ್ನದಿಂದೆಚ್ಚತ್ತಿದ್ದಿಲ್ಲ !

* * * * * * *

ಒಂದು ನಿರ್ಜನವಾದ ಲತಾಕುಂಜ. ಹುಚ್ಚ ಒಂದು ಶಿಲಾಸನದ ಮೇಲೆ ಕುಳಿತಿದ್ದ. ಆತನ ಮುಖದ ಮೇಲೆ ಈಗಲೂ ಆ ಎಂದೂ ಅಳಿಯದ ಸ್ಮಿತ- ಉನ್ಮಾದಿನಿಯು ಆತನೆದುರಿಗೆ ಅನಿಮಿಷಲೋಚನದಿಂದ ನೋಡುತ್ತ ಕುಳಿತಿದ್ದಳು.

" ಪ್ರಿಯತಮ !—"

ಹುಚ್ಚನು ಹಾಗೇ ನೋಡುತ್ತ ಕುಳಿತಿದ್ದ.

" ತಮಗೇನು ಬೇಕು ? "

" ಹಾಡು—" ಇಷ್ಟೇ ಒಂದು ಶಬ್ದ ಆತನ ಬಾಯಿಂದ ಅಸ್ಫುಟವಾಗಿ ಹೊರಬಿತ್ತು.

ಉನ್ಮಾದಿನಿಯು ಬಾಹ್ಯಶೂನ್ಯಳಾಗಿ ಹಾಡಹತ್ತಿದಳು.

ಕಥಯ ಹೇ ನಾಥ! ಸಂಪ್ರತಿ
ಪ್ರಾಪ್ತಯಾಂ ಕಥಂ ತ್ವಯಿ ಸ್ಥಿತಿಂ—

ಬರಬರುತ್ತ ಅವಳ ಧ್ವನಿ ಏರಿತು. ಹುಚ್ಚ ನಿಶ್ಚಲನಾಗಿ ಎತ್ತೋ ನೋಡುತ್ತ ಕುಳಿತಿದ್ದ. ಉನ್ಮಾದಿನಿಗೇ ಬೇಸರಬಂದು ಹಾಡುವದನ್ನು ನಿಲ್ಲಿಸಿದಳು.

" ಪ್ರಿಯತಮ!—"

ಹುಚ್ಚ ಅವಳ ಕಡೆಗೆ ದೃಷ್ಟಿ ತಿರುಹಿದ.

" ನೀವು ಯಾರು ?"

" ಪ್ರಿಯತಮ. "

ಅವಳು ನಿರಾಶಳಾಗಿ ಆತನ ಕಡೆಗೆ ಕರುಣ ದೃಷ್ಟಿಯಿಂದ ನೋಡಿದಳು. ಯಾರಿಗೂ ತಿಳಿಯದ ವಿಚಾರದಲ್ಲಿ ಆತನು ಮುಳುಗಿದ್ದಿರಬಹುದು.

*  *  *  *  *  *  *

ಹುಚ್ಚನಿಗೆ ಕಾಲಗಣನೆಯ ಕಲ್ಪನೆಯಿರುತ್ತಿದ್ದರೆ ಆತನೀಗ ಆರು ವರುಷ ಉನ್ಮಾದಿನಿಯ ಸಾನ್ನಿಧ್ಯದಲ್ಲಿ-ಅವಳ ಪ್ರಣಯದ ಶೀತಸ್ಪರ್ಶಿಯಾದ ಪ್ರಕಾಶದಲ್ಲಿ ಕಾಲಕಳೆಯುತ್ತಿದ್ದ. ಅವಳಿಗಾತನು "ಪ್ರಿಯತಮ" ಆತನಿಗವಳು " ಭೀರು." ಆ ನಿರ್ಜನ ವನಪ್ರದೇಶದಲ್ಲಿ ಅವರಿಬ್ಬರ ಹೊರತು ಇನ್ನಾರೂ ಇದ್ದಂತೆ ತೋರಲಿಲ್ಲ. ಅವರಿಗಾದರೂ ಅದೆಲ್ಲಿ ಬೇಕಿತ್ತು ?

" ಭೀರು—"

"ಪ್ರಿಯುತಮ—" ಅವಳ ದೃಷ್ಟಿಯಲ್ಲಿ ಅನಿರ್ವಚನೀಯ ಪ್ರೇಮವೇ ತುಂಬಿ ತುಳುಕುತ್ತಿತ್ತು.

"ಭೀರು ! ನಿನಗೇನು ಬೇಕು ?"

ಅವಳ ಆನಂದಕ್ಕೆ ಎಣೆಯಿದ್ದಿಲ್ಲ. ಇದೇ ಆ ಕ್ಷಣ. ಏನು ಕೇಳಬೇಕು! ಏನು ಕೇಳಬಾರದು! ಅವಳ ಆಶೆಗೆ ದೃಷ್ಟಿ ಹುಟ್ಟಿತು!

"ಪ್ರಿಯುತಮ! ನನಗೆ ಇರಲಿಕ್ಕೊಂದು ಪ್ರಾಸಾದ ಬೇಕು."

ಹುಚ್ಚನಿಗೆ 'ಪ್ರಾಸಾದ'ವೆಂದರೇನೆಂಬದು ಗೊತ್ತಿದ್ದಂತೆ ತೋರ ಲಿಲ್ಲ. ಆತನು ಹಾಗೇ ಅವಾಕ್ಕಾಗಿ ಕುಳಿತುಕೊಂಡ. ಅವಳ ಗುರಿ ತಪ್ಪಿತು.

"ಅವನ್ತಿ ನಿಮ್ಮ ನೆನಪಿಗೆ ಬರುವದಿಲ್ಲವೇ!"

"ಆತನು ಯಾರು!" ಎಂದು ಹುಚ್ಚ ಕೇಳಿದ.

ಈ ಪ್ರಶ್ನೋತ್ತರ ಕ್ರಮವು ಹೀಗೇ ನಡೆಯುವದು ಶಕ್ಯವಿದ್ದಿಲ್ಲ. ಆದರೂ ಆತನ ಬಾಲಭಾವವನ್ನು ನೋಡಿ ಅವಳಿಗೆ ಕೌತುಕವೆನಿಸಿತು. ಪ್ರೇಮಭರದಿಂದ ಆತನನ್ನು ಬಿಗಿದಪ್ಪಿಕೊಂಡಳು.

* * * * *

ಈ ದಿನ ಹುಚ್ಚನಿಗೆ ಅಕಲ್ಪಿತವಾದ ಆನಂದವಾಗಿತ್ತು, ಆತನು ಆ ಭರದಲ್ಲಿ ಹಾಡತೊಡಗಿದ.

ಮಲ್ಲಿಕಾ--ಸ್ನೇಹ- ಪಂಜರೇ
ಬದ್ಧ ಮಾಂ ವಿದ್ಧಿ ಕೇಸರಂ—
ಭೀರು! ಸಾ ತ್ವದೀಯರೂಪತಾ
ಮಾಧತ್ತೇ-- ತ್ವಂ ತದೀಯತಾ !

ಹರ್ಷದ ಏಕತಾನತೆಯಲ್ಲಿ ಆತನಿಗೇನೋ ಮಿಂಚಿನಂತೆ ಹೊಳೆ ದಂತಾಯಿತು. ಒಂದೊಂದು ನೆನಪಾಗಹತ್ತಿತು—ಒಂದೊಂದು ಮರೆಯ ಹತ್ತಿತು. ಅವನ್ತಿ! ತನ್ನ ಜನ್ಮಭೂಮಿ! ರಾಜಪ್ರಾಸಾದ, ತಂದೆತಾಯಿ ಗಳು, ಇಷ್ಟಮಿತ್ರರು— ಎಲ್ಲವೂ ಎಲ್ಲವೂ ಸ್ಮೃತಿಫಲಕದ ಮೇಲೆ ಮೂಡಹತ್ತಿತು. ಆದರೂ ಈ ಗೀತವೆಲ್ಲಿಯದು! ಶಬ್ದ-ಪ್ರತಿಶಬ್ದವೂ

ಸ್ಮೃತಿಪಟದ ಮೇಲೆ ಬರೆದಿಟ್ಟಿತ್ತು. ಅದರಲ್ಲಿಯ ಒಂದೊಂದು ಶಬ್ದ ವನ್ನು ಉಚ್ಚರಿಸಿ ನೋಡಿದ.

ಮಲ್ಲಿಕಾ -- ಸ್ನೇಹ - ಪಂಜರೇ
ವಿದ್ಧಿ ಮಾಂ ವಿದ್ಧಕೇಸರಂ
ಭೀರು! ಸಾ ತ್ವದೀಯ ರೂಪತಾ
ಮಾಧತ್ತೇ — ತ್ವಂ ತದೀಯತಾ!

ವಿಚಾರದ ಭರದಲ್ಲಿ ಧ್ವನಿಯು ಉಚ್ಚವಾಯಿತು.

'ಭೀರು' ಆ ಮಾಧುರ್ಯದಿಂದ ಮುಗ್ಧಳಾದಳು. ಅವಳು ಕಾಲು ಸಪ್ಪಳ ಮಾಡದೆ ಮೆಲ್ಲಮೆಲ್ಲನೆ 'ಪ್ರಿಯತಮ'ನ ಹತ್ತಿರ ಬಂದು ನಿಂತಳು. ಆತನು ತನ್ನ ಗೀತದ ಸ್ವರಲಹರಿಯಲ್ಲಿ ಅಲೆಯುತ್ತ ತಲೆ ತಗ್ಗಿಸಿ ಕುಳಿತಿದ್ದ.

ಗೀತ ಮುಗಿಯಿತು. ಕಂಪಿತ ಹೃದಯಳಾಗಿ ಆತನನ್ನುಚ್ಚರಿಸಿ ದಳು. "ಪ್ರಿಯತಮ!"

ತಲೆಯೆತ್ತಿ ನೋಡಿದ.

'ಭೀರು' ಭಯಭೀತಳಾದಳು. ಈಗವಳ ದೃಷ್ಟಿಗೆ ಬಿದ್ದವ ಅವಳಿಗೆ ಅಪರಿಚಿತ. ಚಿಟ್ಟನೇ ಚೀರಿ ಮೂರ್ಚ್ಛಿತಳಾದಳು?

* * * * * * *

ಅವನ್ತಿಪುರದಲ್ಲಿ ಒಂದು ದಿನ ಹರ್ಷದ ವೃಷ್ಟಿಯಾಯಿತಂತೆ. ಎಷ್ಟೋ ವರ್ಷಗಳ ಹಿಂದೆ ಸದ್ದಿಲ್ಲದೇ ಇಲ್ಲದಂತಾದ ರಾಜಕುಮಾರನು ಒಂದು ದಿನ ಮರಳಿ ಬಂದನಂತೆ. ಬರುವಾಗ ತನ್ನ ಹೆಂಡತಿ ಅಲಕಾ ವತಿಯ ರಾಜನ ಮಗಳಾದ ಅಲಕನನ್ದೆಯನ್ನು ಕರಕೊಂಡು ಬಂದಿದ್ದ. ಆ ಪತಿಪತ್ನಿಯರ ಸೌಖ್ಯಕ್ಕಂತೂ ಸೀಮೆಯಿದ್ದಿಲ್ಲ

ಅಲಕನನ್ದೆಗೆ ಇನ್ನೂ ಒಮ್ಮೊಮ್ಮೆ "ಪ್ರಿಯತಮ"ನ ನೆನಪಾಗಿ ಅವಳ ಮನಸ್ಸು ಖಿನ್ನವಾಗುತ್ತದೆ.

# ತಾಯಮ್ಮ

ಪಂಡಿತ ವಿಶ್ವೇಶ್ವರ ಶಾಸ್ತ್ರಿಯವರ ಮನೆತನವು ಬಹು ಪ್ರಾಚೀನ ವಿದ್ವ ವಿದ್ವಾಂಸರಲ್ಲಿ ಒಳ್ಳೇ ಮಾನವುಳ್ಳದಾಗಿತ್ತು. ಈ ಪುರಾತನ ವೃಕ್ಷದ ಟೊಂಗೆಗಳು ದಿಕ್ಕುದಿಕ್ಕಿಗೆ ಹರಡಿರಲಿಲ್ಲವಾದಾಗ್ಯೂ ಅದರ ಇತಿಹಾಸವು ಅತ್ಯದ್ಭುತವೂ ಮನೋರಂಜಕವೂ ಆಗಿತ್ತು.

ಈ ಮನೆತನದ ಮೂಲಪುರುಷರಾದ ಈಶ್ವರಸ್ವಾಮಿಗಳು ಮಹಾ ಪ್ರತಾಪಶಾಲಿಯಾದ ಯದುರಾಯನ (?) ಕುಲಪುರೋಹಿತರು. ಇವರ ಅಚಲವಾದ ನಿಷ್ಠೆಗೆ ಮೆಚ್ಚಿ ದೇವಾಧಿದೇವನಾದ ಈಶ್ವರನು ತನ್ನ ಜ್ಯೋತಿರ್ಮಯವಾದ ಲಿಂಗವನ್ನು ಕೊಟ್ಟನು. ಈ ಲಿಂಗವೆಂದರೆ ಒಂದು ವಜ್ರದಲ್ಲಿ ಕೆತ್ತಿದ ಪಿಂಡಿಕೆಯು. ಈ ತೇಜೋಮಯ ಲಿಂಗವನ್ನು ನೋಡಲಿಕ್ಕೆ ಬೇರೆಬೇರೆ ದೇಶದಿಂದ ಭಾವಿಕರು ಬಂದು ತಮ್ಮ ವಾಂಛಿತ ಫಲವನ್ನು ಪಡಕೊಂಡು ಹೋಗುತ್ತಿದ್ದರು. ಈ ಹೊರ್ತಾಗಿ ಒಂದು ವಜ್ರಮಯವಾದ ಬೋರ್ಜಗುಲಿ, ಬಂಗಾರದ ತೇರು, ಮುತ್ತಿನ ಬೀಸಣಿಕೆ, ವೇದಾಕ್ಷರಗಳಿಂದ ಯುಕ್ತವಾದ ಅಭಿಷೇಕ ಪಾತ್ರೆ ಮುಂತಾದ ಅನೇಕ ನೋಡತಕ್ಕ ವಸ್ತುಗಳು ದಿಕ್ಕುದಿಕ್ಕುಗಳಲ್ಲಿ ಒಳ್ಳೇ ಖ್ಯಾತಿಯನ್ನು ಹೊಂದಿದ್ದವು. ಅಚಲವಾದ ಕೀರ್ತಿಯಂತೆ ಚಂಚಲಳಾದ ಲಕ್ಷ್ಮಿಯು ಸಹ ಈ ಮನೆತನದ ಪುರುಷರು ತನ್ನ

ಚೊಚ್ಚಲ ಮಕ್ಕಳೆಂದೇ ಭಾವಿಸಿದ್ದಳು. ಇತ್ತ ಯದುರಾಯನಾದರೂ ಬಹು ನಿಷ್ಠಾವಂತನು. ಪುರೋಹಿತರ ಮನೆಯಲ್ಲಿದ್ದ ಜ್ಯೋತಿರ್ಲಿಂಗಕ್ಕೆ ನೈವೇದ್ಯವನ್ನು ತೋರಿಸದೆ ಅವನು ಎಂದಿಗೂ ಊಟಮಾಡಲಿಲ್ಲ. ಒಂದು ರಾತ್ರಿ ಕಳ್ಳರು ಬಂದು ಆ ಲಿಂಗವನ್ನೇ ಎತ್ತಿಕೊಂಡು ಹೋದರು. ತಿರುಗಿ ಅದು ದೊರೆಯಲಿಕ್ಕೆ ಹದಿನೈದು ದಿನಗಳು ಬೇಕಾದವು.

'ಹದಿನೈದು ದಿನಗಳಿಂತು ಚೋರರ್ ಗೇಹದೊಳ್ ವಾಸಿಪ ಈಶ್ವರಂಗೆ–' (ಕೇರಳ ಸುಬ್ರಹ್ಮಣ್ಯಕೃತ * ಲಿಂಗರಾಜ ಮಹಿಮೆ) ಅವನು ಅನುಗ್ರಹವನ್ನೇ ಮಾಡಲಿಲ್ಲ. ಮುಂದೆ ಆ ಕಳ್ಳರೆಲ್ಲರು ರಕ್ತ. ಕಾರಿ ಸತ್ತು ಹೋದರು; (ಇದಕ್ಕೆ ತಂಜಾವೂರದಲ್ಲಿ ಸಿಕ್ಕ ಒಂದು ಮರಾಠಿ ಬಖರಿನ ಆಧಾರ.) ಮತ್ತು ಲಿಂಗವು ಮನೆಗೆ ಬಂದಿತು ಯದುರಾಯನಿಗೆ ಸಹ ಸಾಕ್ಷಾತ್ಕಾರವಾಗಿತ್ತೆಂದು ಹೇಳುತ್ತಾರೆ. ಆಗಿರಬಹುದು. ಅವನು ಅಷ್ಟು ನಿಷ್ಟಾವಂತನಲ್ಲವೆಂದು ನಾನಾದರೂ ಹೇಗೆ ಹೇಳುವದು !

---

* ಈ ಗ್ರಂಥಕರ್ತರು ಇ. ಸ. ೧೫೪೨ ಜನೆವರಿ ತಿಂಗಳ ೪ ಅಥವಾ ೫ನೇ ತಾರೀಖಿನ ದಿವಸ ಮಧ್ಯಾಹ್ನದ ನಂತರ ೨ ಹೊಡೆದು ೧೩ ಮಿನಿಟ ೫೨ ೧೧/೧೪ ಸೆಕಂಡಿಗೆ ಹುಟ್ಟಿರಲಿಕ್ಕೆ ಬೇಕೆಂದು ಪಾಶ್ಚಾತ್ಯ ಪಂಡಿತರ ಮತವಿದೆ. ಹಲವರು ಈ ಗ್ರಂಥದ ಕಾಲವು ಇ. ಸ. ೧೫೬೨ ಅಗಸ್ಟ ತಿಂಗಳೆಂದು ಹೇಳುತ್ತಾರೆ. ಅಂದರೆ ಗ್ರಂಥವನ್ನು ಬರೆದಾಗ ಗ್ರಂಥಕರ್ತರೇ ಇನ್ನೂ ಹುಟ್ಟಿದ್ದಿಲ್ಲವೆಂಬದಾಗಿ ಅರ್ಥವು ಹೊರಡುತ್ತದೆ. ಇ. ಸ. ೧೫೨೨ರಲ್ಲಿ ಗ್ರಂಥಕರ್ತರು ಹುಟ್ಟಿದ್ದಿಲ್ಲವೆಂಬದಕ್ಕೆ ಆಧಾರವು ಸಿಕ್ಕಿರುವದು. ಇವರ ತಂದೆಯವರ ವ್ರತಬಂಧವು ೧೫೨೮ ರಲ್ಲಿ ಆಯಿತೆಂದು ಒಂದು ಪತ್ರದಲ್ಲಿ ಉಲ್ಲೇಖವಿರುವದು. ಏನೇ ಆಗಲಿ ಸುಬ್ರಹ್ಮಣ್ಯರು ಹದಿನಾರನೇ ಶತಮಾನದ ೨ನೇ ಪಾದದಲ್ಲಿ ಹುಟ್ಟಿರಬಹುದೆಂದು ನನ್ನ ಅಭಿಪ್ರಾಯ. ಇವರು ಬರೆದ ಗ್ರಂಥಗಳಲ್ಲಿ ಇಂದೊಂದೇ ಗ್ರಂಥವು ಉಪಲಬ್ಧವಿರುವದು. ಇದರಲ್ಲಿ ಅಪೂರ್ಣಾವಸ್ಥೆಯಲ್ಲಿರತಕ್ಕ ದೋಷಗಳು ಅಸ್ತಂಗತವಾಗಿ ಸಂಪೂರ್ಣಾವಸ್ಥೆಯಲ್ಲಿರತಕ್ಕ ಗುಣಗಳು ಉದಯೋನ್ಮುಖವಾಗಿವೆ. ಈ ಕಾರಣಗಳಿಂದ ಈ ಗ್ರಂಥವನ್ನು ಸುಬ್ರಹ್ಮಣ್ಯರು ಸಂಕ್ರಮಣ ಕಾಲದಲ್ಲಿ ಬರೆದಿರಲಿಕ್ಕೆ ಸಾಕು!

-ಗ್ರಂಥಕರ್ತರು

ಕಾಲಾಂತರದಿಂದ ಯದುರಾಯನು 'ಎಲ್ಲರ ಮಾರ್ಗ'ವನ್ನು ಹಿಡಿದನು. ಇದೇ ಸಮಯಕ್ಕೆ ಲಿಂಗವಾದರೂ ಜ್ಯೋತಿರ್ವಿಲೀನವಾಗಿರಬಹುದು. ಯಾಕೆಂದರೆ, ಈ ಮುಂದೆ ಅದರ ವಿಷಯವಾಗಿ ಮನೆತನದ ಇತಿಹಾಸದಲ್ಲಿ ಸಹ ಮಾತು ಬಂದಿಲ್ಲ! ಮೇಲಾಗಿ ಲಿಂಗ, ಬೋರ್ಜಗುಲಿ, ತೇರು ಇವುಗಳಲ್ಲಿ ಒಂದು ಸಹ ಈಗ ವಿಶ್ವೇಶ್ವರಶಾಸ್ತ್ರಿಯವರ ಕಡೆಗೆ ಇಲ್ಲ. 'ಆ ಸರ್ವರ್‍ ಮರೆಯಾದರಾರವಶದಿಂದಾಕಾಲಗೀ ಪಂದನಂ!'

ಈ ಮನೆತನದ ವಿಷಯವಾಗಿ ಮತ್ತೊಂದು ದಂತಕಥೆಯನ್ನು ಇಲ್ಲಿ ಹೇಳುವದು ಅವಶ್ಯವಿದೆ. ಯಾಕಂದರೆ ಅದು ಈ ಮನೆತನದ ವಿಷಯವಾಗಿಯೇ ಇರುತ್ತದೆ. ಹಿಂದಕ್ಕೆ ಈ ಮನೆತನದ ಓರ್ವ ಕನ್ನಿಕೆಯು ವೇದ ಪಠಣವನ್ನು ಮಾಡಿದ್ದಕ್ಕಾಗಿ ಸೂತ್ರಪುರದ ಬ್ರಹ್ಮವೃಂದವು ಅವಳನ್ನು ಗಣಿಕೆಯೆಂದು ಭಾವಿಸತಕ್ಕದ್ದೆಂದು ನಿರ್ಣಯಿಸಿದರು. ಅವಳ ತಂದೆತಾಯಿಗಳೂ ಅವಳ ಗಂಡನೂ ಅವಳನ್ನು ಮನೆಯಲ್ಲಿಟ್ಟುಕೊಂಡರೆ ಅವರು ಬಹಿಷ್ಕೃತರಾಗುವರೆಂತಲೂ ನಿರ್ಣಯವಾಗಿತ್ತು. ಈ ಪರಿಯಾಗಿ ಓರ್ವ ಕನ್ನಿಕೆಯ ಮಹದಪರಾಧಕ್ಕೋಸ್ಕರ ಎರಡು ಮನೆಗಳು ಸಂಕಟದಲ್ಲಿ ಬಿದ್ದವು. ಮುಂದೆ ಆವುದೋ ಒಂದು ಪೀಠದ ಶಂಕರಾಚಾರ್ಯರು ಸೂತ್ರಪುರಕ್ಕೆ ಬಂದಾಗ್ಗೆ ಯೋಗ್ಯ ಪ್ರಾಯಶ್ಚಿತ್ತವನ್ನು ಕೊಟ್ಟು ಬಹಿಷ್ಕಾರವನ್ನು ತೆಗೆದು ಹಾಕಿದರು. ಮತ್ತು ಆ ಕನ್ನಿಕೆಗೆ ವೇದಾಕ್ಷರಗಳನ್ನು ಮರೆತುಬಿಡಲಿಕ್ಕೆ ಅಪ್ಪಣೆಮಾಡಿದರು. ಅಂದಿನಿಂದ ಸೂತ್ರಪುರದ ಎರಡೂ ಮನೆತನಗಳಿಗೆ 'ಪಂಕ್ತಿಪಾವನ'ರೆಂದು ಹೆಸರು ಬಿದ್ದಿರುವದು. ಇದೇ ಒಂದು ಕುಂದು! ಈ ಹೊರತಾಗಿ ಮತ್ತಾವ ದೋಷವೂ ತಟ್ಟಿರುವದಿಲ್ಲ. ವಿಶ್ವೇಶ್ವರ ಶಾಸ್ತ್ರಿಗಳ ಪಿತಾಮಹರಾದ ಸಂಜುಂಡ ಶಾಸ್ತ್ರಿಗಳು ತುಸುಮಟ್ಟಿಗೆ ವಿಲಾಸಲೋಲುಪರಾದರೂ ಮಡಿಮೈಲಿಗೆ ಮುಂತಾದ ಕರ್ಮಕಾಂಡಗಳನ್ನು ಒಳ್ಳೆ ಆಸ್ಥೆಯಿಂದ ಪರಿಪಾಲಿಸುತ್ತಿದ್ದರು. ಇಂಥ ಶಿಷ್ಟಾವಂತರ ಮನೆತನವಿದು.

ಮತ್ತೊಂದು ವೈಶಿಷ್ಟ್ಯವೆಂದರೆ ಇವರ ವಂಶಪರಂಪರೆಯೂ ಗುರುಪರಂಪರೆಯೂ ಒಂದೇ ಆಗಿದ್ದವು. ಅಂದರೆ ತಂದೆಯೇ ಮಗನಿಗೆ ಗುರು.

ವಿದ್ಯಾಭ್ಯಾಸಕ್ಕಾಗಿ ಹೆರವರಿಗೆ ಕೈ ಜೋಡಿಸುವ ಪ್ರಸಂಗವೇ ಬರಲಿಲ್ಲ. ಈ ಪರಂಪರೆಯು ವಿಶ್ವೇಶ್ವರ ಶಾಸ್ತ್ರಿಗಳ ಕಾಲಕ್ಕೆ ಸ್ವಲ್ಪಮಟ್ಟಿಗೆ ಮುರಿದಂತಾಯಿತು. ಗೋವಿಂದಶಾಸ್ತ್ರಿಗಳು (ವಿಶ್ವೇಶ್ವರ ಶಾಸ್ತ್ರಿಗಳ ತಂದೆಗಳ ಹೆಸರು) ಸತ್ತಾಗ ಅವರು ೧೪ ವರ್ಷದವರಿದ್ದರು. ಪ್ರಪಂಚದ ಕೆಲಸವು ಮೈಮೇಲೆ ಆ ಕಾಲಸಲ್ಲಿ ಬಿದ್ದು ವಿದ್ಯಾಭ್ಯಾಸವೇನೂ ಆಗಲಿಲ್ಲ. ಸಾಂಪತ್ತಿಕ ಸ್ಥಿತಿಯಾದರೂ ಅಷ್ಟಕ್ಕೆ ಅಷ್ಟೇ ಉಳಿಯಿತು. ಇದೇ ಸಮಯಕ್ಕೆ ಇಂಗ್ರೇಜಿ ಶಿಕ್ಷಣವು ಪ್ರಬಲವಾದುದರಿಂದ ಎಲ್ಲ ಶಾಸ್ತ್ರಿಗಳ ಮನೆತನಗಳೂ ಹಿಂದಕ್ಕೆ ಬಿದ್ದವು. ಆಗಿನಿಂದ ಶಾಸ್ತ್ರಿಗಳ ಮನೆಯು ಬಹುತರವಾಗಿ ಅಡಕಲದಲ್ಲಿ ಸಿಲುಕಿಕೊಂಡಂತಾಯಿತು.

ಶಾಸ್ತ್ರಿಗಳ ಮದುವೆಯು ತಡವಾಗಿ (ಅವರ ೨೬ನೇ ವರ್ಷ) ಆಯಿತು. ಅವರ ಹೆಂಡತಿಯಾದ ಮೀನಾಕ್ಷಿಯಮ್ಮನವರು ಬಹಳ ಗುಣವಂತರಾಗಿದ್ದರು. ನೆರೆಹೊರೆಯವರ ಮೇಲೆ ಉಪಕಾರವನ್ನು ಮಾಡುವದೇ ಅವರ ವ್ಯವಸಾಯ. ಅವರ ಚೊಚ್ಚಲ ಮಗನು ೧೮ ವರ್ಷಗಳ ವರೆಗೆ ಬಾಳಿ ಅಕಸ್ಮಾತ್ತಾಗಿ ಗಂಟುಬೇನೆಯಿಂದ ಸತ್ತನು. ಆ ಮೇಲೆ ೨ ವರ್ಷಗಳ ನಂತರ ಒಬ್ಬ ಮಗಳಾದಳು. ಮೊದಲೆ ಪುತ್ರಶೋಕದಿಂದ ಹಣ್ಣಾದ ಪುತ್ರವತ್ಸಲ ಮಾತೆಗೆ ಪ್ರಸೂತಿ ಶ್ರಮವು ಮಿಕ್ಕಿಮೀರಿ ಅವಳಾದರೂ ಮಗನ ಮಾರ್ಗವನ್ನೆ ಹಿಡಿದಳು.

ಶಾಸ್ತ್ರಿಗಳ ಎಲ್ಲ ಮಾಯಾಪಾಶವು ಹರಿದು ಹೋದಂತೆಯೇ ಆಗಿತ್ತು. ಒಂದು ಮಿಕ್ಕ ಚುಂಗುಮಾತ್ರ ಉಳಿದಿತ್ತು; ಅದಾವುದೆಂದರೆ ಮಾತೃಹೀನಳಾದ ಮಾಯಾವತಿಯು. ಇದೇ ಸಮಯಕ್ಕೆ ಅವರ ಪರಮ ಸ್ನೇಹಿತರಾದ ಜಯರಾಯರು ತಮ್ಮ ಮಗನಾದ ಮಧುಸೂದನನ್ನು ಬಿಟ್ಟು ಪರಲೋಕಕ್ಕೆ ಹೋದರು. ಇದು ಮೇಲೆ ತಮ್ಮ ಸ್ನೇಹಿತನ ಮಗುವನ್ನು ಪರಿಪಾಲಿಸುವ ಭಾರವನ್ನಾದರೂ ಶಾಸ್ತ್ರಿಗಳೇ ವಹಿಸಬೇಕಾಯಿತು. ಅಂದಿನಿಂದ ಮಧುಸೂದನನು ಮಾಯಾವತಿಯ ಬಾಲಸ್ನೇಹಿತನಾಗಿ ಶಾಸ್ತ್ರಿಗಳ ಹತ್ತಿರ ಇರಹತ್ತಿದನು.

ಮಧುಸೂದನನ ವಿದ್ಯಾಭ್ಯಾಸವು ಕ್ರಮವಾಗಿ ನಡೆಯಿತು.

ಇತ್ತ ಮಾಯಾವತಿಯು ಸಹ ಸಾವಕಾಶವಾಗಿ ಕನ್ನಡ ಸಂಸ್ಕೃತ ಪುಸ್ತಕಗಳನ್ನೂ ಓದುತ್ತಿದ್ದಳು. ಶಾಸ್ತ್ರಿಗಳಾದರೂ ಅವರಿಬ್ಬರ ಮನೋವಿಕಾಸವನ್ನು ನೋಡುತ್ತ ದಿನಗಳೆಯುತ್ತಿದ್ದರು.

ಸೂತ್ರಪುರದ ಬೀದಿಬೀದಿಯಲ್ಲಿ ಭಿಕ್ಷೆಗಾಗಿ ತಿರುಗಾಡುತ್ತಿರುವ ಅಂಬೆಯು ಗಣನೆಯು ಮಾನವಕೋಟಿಯಲ್ಲೇನಾಗಲಿಲ್ಲವು, ಅಂಬೆಯೆಂದರೆ ಒಬ್ಬ ಕಿರಿಯ ಗಿಡ್ಡ ಹುಡಿಗೆ. ಅವಳ ಮುಖಮುದ್ರೆಗಳನ್ನು ನೋಡಿದ ಕೂಡಲೆ ಎಲ್ಲರೂ ಅವಳು ಹುಚ್ಚಿಯೆಂದು ಹೇಳುತ್ತಿದ್ದರು. ಅವಳ ಕಣ್ಣುಗಳು ದೂರದೂರವಾಗಿದ್ದು ಕಿವಿಕಡೆಗೆ ಹರಿಯುವವು ಹೋಗುವಂತೆ ತೋರುತ್ತಿದ್ದವು. ಅವಳು ನೋಡುವಾಗ ಗೋಣು ಸೊಟ್ಟ ಮಾಡುತ್ತಿದ್ದಳಾದ್ದರಿಂದ ಜನರು 'ಅವಳಿಗೆ ತಿರಸಂಗಣಿಯ ಅಂಬೆ'ಯೆಂದು ಕರೆಯುತ್ತಿದ್ದರು. ಅವಳ ಮೂಗು ಸರಳವಾಗಿ ಒಂದಿತ್ತು, ಆದರೆ ಮೇಲ್ದುಟಿಯು ಹಚ್ಚಿಗೆ ಮುಂದೆ ಒಂದಿದ್ದರಿಂದ ಮೋರೆಯು ಮೊದಲನೇ ದೃಷ್ಟಿಪಾತಕ್ಕೆ ಕುರೂಪವಾಗಿ ಕಾಣುತ್ತಿತ್ತು. ಸೂಕ್ಷ್ಮದೃಷ್ಟಿಯಿಂದ ನೋಡುವವನಿಗೆ ಮಾತ್ರ ಆ ಮೋರೆಯು ಆಶ್ಚರ್ಯ ಭಯ ಮುಂತಾದ ಅನೇಕ ವಿಕಾರಗಳನ್ನುಂಟುಮಾಡುತ್ತಿತ್ತು. ಅವಳ ವಯಸ್ಸು ೧೩–೧೪ ಆಗಿದ್ದರೂ ಅವಳು ಗಿಡ್ಡಿಯಾದುದರಿಂದ ೧೦ ವರ್ಷದವಳೇ ಎಂದು ಗೃಹಿಕೆಯಾಗುತ್ತಿತ್ತು.

'ಅಂಬೆ! ಜಗದಂಬೆ! ಭವಾನಿ! ತಾಯಮ್ಮ!' ಅನ್ನುತ್ತನ್ನುತ್ತ ಜನರು ಅವಳಿಗೆ ತಾಯಮ್ಮನೆಂದೇ ಕರೆಯುತ್ತಿದ್ದರು. ಚೇಷ್ಟೆಗಂತೂ ಸೀಮೆಯೇ ಇದ್ದಿಲ್ಲ. ಊರೊಳಗಿನ ಮುಸಲ್ಮಾನ ಹೂಗಾರನು "ಬಂದಿಗೀ ಬೇಗಮ್ ಸಾಹೇಬಾ! ಹುಜೂರಕೇಲಿಯೆ ಮೇ ಇಧರ ಖಡಾ ಹೂ. ಜೋ ಕುಚ್ ಹೋನಾತೊ ಯಹ ಬಂದೇಕೂ ಫರಮಾಯಿಯೆ" ಎಂದು ಯೋಗ್ಯ ಅಭಿವಾದನವನ್ನು ಮಾಡುತ್ತಿದ್ದನು. ಸುತ್ತಮುತ್ತ ಕುಳಿತ ಜನರೆಲ್ಲ ಹೀ! ಹೀ ಎಂದು ನಗುತ್ತಿದ್ದರು. ಅವಳು ಫೇಡೆ ಮಾರುವ 'ಪರದೇಶಿ'ಯ ಅಂಗಡಿ ಮುಂದಿನಿಂದ ಹಾದು ಹೋದರೆ "ಫುಲವಾಲೀ ತೂ ಕಹಾ ಚಲೀ? ಪೀತಮು ದೇಖನೇಕೂ?"

ಎಂದು ಕೂಗಿ ಕಣ್ಣು ಹಾರಿಸುತ್ತ ಹಾಡಲಿಕ್ಕೆ ಪ್ರಾರಂಭ ಮಾಡುತ್ತಿದ್ದನು. ಇದಕ್ಕೂ ಹೆಚ್ಚಿಗೆ ಯಾರೂ ಅವಳ ಗೋಜಿಗೆ ಹೋಗುತ್ತಿದ್ದಿಲ್ಲ. ಆದರೆ ಓಣಿಯೊಳಗಿನ ಹುಡುಗರಿಗೇನು ಆ ಮಾತು? ಅವರು ತಮ್ಮಷ್ಟೇ ನಿರುದ್ಯೋಗಿಯಾದ ನಾಯಿಗಳನ್ನು ಕಟ್ಟಿಕೊಂಡು ಅವಳ ಹಾದಿಯನ್ನು ಕಟ್ಟುತ್ತಿದ್ದರು. ಅಣಕಿಸಿ ತೋರುವದು, ಮಣ್ಣು ತೂರುವದು, ಕಣ್ಣು ಹೊಡೆಯುವದು; ಅವಳು ಸಿಟ್ಟಿಗೆದ್ದರೆ ಬೊಬ್ಬೆಕುಟ್ಟಿ ಕೂಗಿ ಅವಳನ್ನು ಮತ್ತಷ್ಟು ಸಿಟ್ಟಿಗೆಬ್ಬಿಸುವದು ಇವೇ ಮುಂತಾದ ಕೆಲಸಗಳಲ್ಲಿ ನಿಜಯೋಲ್ಲಾಸದಿಂದ ಹುಡುಗರು ಮಗ್ನರಾಗುತ್ತಿದ್ದರು. ಸಂಜೆಯ ಸಮಯಕ್ಕಂತೂ ಈ ಗದ್ದಲಕ್ಕೆ ದೊಡ್ಡ ಮೆರವಣಿಗೆಯ ಸ್ವರೂಪವು ಬಂದು ಹಾದಿಯಿಂದ ಬರಹೋಗುವವರಿಗೆ ತೊಂದರೆಯುಂಟಾಗುತ್ತಿತ್ತು. ಒಂದು ದಿನ ಒಬ್ಬ ಉಚ್ಛೃಂಖಲ ತರುಣನು ಅವಳಗೂಡ ಅಸಭ್ಯವರ್ತನವನ್ನು ಮಾಡಿದನು. ಅದೇ ಸಮಯಕ್ಕೆ ಮಧುಸೂದನನು ಅದೇದಾರಿಯಿಂದ ಹೋಗುತ್ತಿದ್ದನು. ಅವಳ ದುರವಸ್ಥೆ ನೋಡಿ ಕನಿಕರಬಟ್ಟು ಆ ತರುಣನ್ನು ದಂಡಿಸಿ ಅವಳನ್ನು ತನ್ನೊಡನೆ ಮನೆಗೆ ಕರೆದುಕೊಂಡು ಬಂದನು. ಅಂದಿನಿಂದ ಶಾಸ್ತ್ರಿಗಳ ಮನೆಯ ಪಡಸಾಲೆಯ ಒಂದು ಮೂಲೆಯು ತಾಯವ್ವನ ವಸತಿಸ್ಥಾನವಾಯಿತು.

* * * * * * *

ಆ ಮೇಲೆ ತಾಯವ್ವನ ವ್ಯವಸಾಯವೆಂದರೆ ಊಟಮಾಡುವದು ಮನಸ್ಸಿಗೆ ಬಂದರೆ ಎರಡು ಕೆಲಸ ಮಾಡುವದು ಇಲ್ಲದೆ ಇದ್ದರೆ ಮುಸುಕು ಹಾಕಿಕೊಂಡು ಮಲಗಿಕೊಳ್ಳುವನು. ಈ ಪ್ರಕಾರ ಅವಳು ಮಲಗಿಕೊಂಡಳೆಂದರೆ ಕೇಳುವವರಾರು? ಆ ಮೇಲೆ ಕೆಲಸದ ಮಾತಾದರೂ ಬರುವದು ಹೇಗೆ? ಈ ಸಮಯಕ್ಕೆ ಮಧುಸೂದನನು ಒಂದು ಕೆಲಸವನ್ನು ಹೇಳಿದರೆ ತಾಯವ್ವನು ತತ್‌ಕ್ಷಣವೇ ಎದ್ದು ಅವನ ಕೆಲಸವನ್ನು ಮಾಡುತ್ತಿದ್ದಳು. ಕೆಲಸವು ತೀರಿದ ಕೂಡಲೆ ಮತ್ತೆ ಮಲಗಿಕೊಳ್ಳುವ ವಿಚಾರವೇ. ಸರ್ಕಸ್ಸಿನ ಪರಿಭಾಷೆಯಲ್ಲಿ ಹೇಳಬೇಕಾದರೆ ಮಧುಸೂದನನು ತಾಯವ್ವನಿಗೆ 'ರಿಂಗಮಾಸ್ಟರ'ನಾಗಿದ್ದನು. ಅವನು

ಮನೆಯಲ್ಲಿದ್ದಾಗ ತಾಯಮ್ಮನು ಮೌನದಂತೆ ಮೆತ್ತಗಿರುತ್ತಿದ್ದಳು. ಅವನ ಮೋರೆಯ ಕಡೆಗೆ ನೋಡುವ ಸಾಹಸವು ಅವಳಲ್ಲಿದ್ದಿಲ್ಲ. ಒಮ್ಮೊಮ್ಮೆ ಬಾಗಿಲ ಸಂದಿಯಲ್ಲಿ ನಿಂತುಕೊಂಡು ಸತೃಷ್ಣ ದೃಷ್ಟಿಯಿಂದ ಅವನ ಕಡೆಗೆ ನೋಡುತ್ತ ತನ್ನನ್ನೇ ಮರೆತುಬಿಡುತ್ತಿದ್ದಳು. ಇದು ಅವಳ ಕೃತಜ್ಞತೆಯಿರಬಹುದು.

ಒಂದು ದಿನ ಮನೆಯ ಒಳ ಅಂಗಳದಲ್ಲಿ ಗುಬ್ಬಿಗಳು ಅಲ್ಲಿ ಬಿದ್ದ ಜೋಳದ ಕಾಳುಗಳನ್ನು ಆರಿಸುತ್ತಿದ್ದವು. ಅದನ್ನು ನೋಡಿ ತಾಯಮ್ಮನು ಒಳಗಿನಿಂದ ಬೊಗಸೆ ತುಂಬ ಜೋಳವನ್ನು ತಂದು ಸೂರೆಮಾಡಿ ಬಿಟ್ಟಳು. ಒಂದಾಯಿತು, ಎರಡಾಯಿತು, ಮೂರಾಯಿತು; ಈ ಪ್ರಕಾರ ಕ್ರಮವೇ ನಡೆಯಿತು. ಮಾಯಾವತಿ ಒಂದು ನೋಡುತ್ತಾಳೆ— ಸಿಟ್ಟಿನಿಂದ ಕೈಯಲ್ಲಿದ್ದ ಕಸಬರಿಗೆಯನ್ನು ತಾಯಮ್ಮನ ಕಡೆ ಒಗೆದಳು. ಅವಳು ಮಾಯಾವತಿ ಕಡೆಗೆ ಒಮ್ಮೆ ತಿರಸ್ಕಾರದಿಂದ ನೋಡಿ ಮತ್ತೊಂದು ಬೊಗಸೆ ತುಂಬ ಜೋಳವನ್ನು ಸೂರೆಮಾಡಿದಳು. ಮಾಯಾವತಿಯು ಸಿಟ್ಟಿನಿಂದ ಬೈಯ[illegible]ಳು. ಅಷ್ಟರಲ್ಲಿ ಮಧುಸೂದನನು ಬಂದನು. ಅವನನ್ನು [illegible] ತಾಯಮ್ಮನು ತನ್ನ ಹಾಸಿಗೆಯ ಮೇಲೆ ಹೋಗಿ ಮುಸುಕು ಹಾಕಿಕೊಂಡು ಮಲಗಿಕೊಂಡಳು.

"ಏನು ನಡೆದಿದೆ? ತಾಯಮ್ಮ ಇತ್ತಬಾ." ಅವನ ಶಬ್ದವನ್ನು ಕೇಳಿದ ಕೂಡಲೆ ಅವಳು ಚಟ್ಟನೆ ಎದ್ದು ಅಪರಾಧಿಯಂತೆ ನಿಂತು ಕೊಂಡಳು. ಇನ್ನೊಮ್ಮೆ ಇಂಥ ಕೆಲಸವನ್ನು ಮಾಡಲಾಗದೆಂಬ ಮಾತಿಗೆ ಒಪ್ಪಿಕೊಂಡಳು. ಆದರೆ ಮಾಯಾವತಿಯ ಕಾಲು ಬೀಳೆಂದಾಗ ಮೋರೆಯನ್ನು ತಗ್ಗಿಸಿ ಸ್ವಸ್ಥವಾಗಿ ನಿಲ್ಲುವ ಅವಳ ಮನೋರಥವು ಕಂಡು ಬಂದಿತು.

* * * * *

ಒಂದು ದಿನ ತಾಯಮ್ಮನು ಕಸ ಹೊಡೆಯುವಾಗ ಏನೊ ಒಂದು ವಿಚಾರವು ಮನಸ್ಸಿನಲ್ಲಿ ಬಂತು. ಕಸಬರಿಗೆಯನ್ನು ಅಲ್ಲಿಯೇ ಬಿಟ್ಟು ಟೊಂಕದ ಮೇಲೆ ಕೈಯನ್ನಿಟ್ಟುಕೊಂಡು ಅವಳು ಹಾಡುತ್ತಿದ್ದಳು.

ಮಾಧವನೀ ಬಾ। ಮಧುಸೂದನ ಬಾ
ಮಾಧವ ಮಧುಸೂದನ ಬಾರೋ ॥

ತನು ಹೊತ್ತಿನಲ್ಲಿ ಸ್ವರವು ಉಚ್ಚವಾಯಿತು; ಮತ್ತು ಆ ಸ್ವರದ ತಂದ್ರಿಯಲ್ಲಿ ಮಗ್ನಳಾಗಿ ತಾಳದಂತೆ ಕುಣಿಯುತ್ತಿದಳು. ಈ ಅಪೂರ್ವ ಪ್ರಸಂಗವನ್ನು ನೋಡಲಿಕ್ಕೆ ಮಧುಸೂದನನು ಅಲ್ಲಿಯೇ ಇದ್ದನು. ಅವನಿಗೆ ನಗೆ ಹಿಡಿಸಲಾರದಷ್ಟಾಗಿ "ಯಾಕೆ? ನಾನು ಇಲ್ಲಿ ಬಂದಿರು ವೆನು, ಏನಪ್ಪಣೆ?" ಎಂದು ಕೇಳಿದನು. ತಾಯಮ್ಮನು ಓಡಿಹೋದಳು.

* * * * *

ಶಾಸ್ತ್ರಿಗಳಿಗೆ ಮಧುಮೇಹವಿತ್ತು. ಅವರು ಶರೀರಬಲದಿಂದ ಸಣ್ಣಂದಿನಿಂದ ನೆಟ್ಟಗಿದ್ದರೂ ವಯಸ್ಸಾದಂತೆ ಈ ರೋಗವು ಮೆಲ್ಲನೆ ತಲೆಯೆತ್ತುತ್ತಿತ್ತು. ದಿನದಿನಕ್ಕೆ ಕ್ಷೀಣರಾಗಿ ಹಾಸಿಗೆಯನ್ನೇ ಹಿಡಿದರು. ಈ ಸಮಯಕ್ಕೆ ಮಾಯಾವತಿಯು ಮತ್ತು ಮಧುಸೂದನನು ಇವರಿಬ್ಬರು ಬಹು ಪರಿಯಾಗಿ ಇವರ ಶುಶ್ರೂಷೆಯನ್ನು ಮಾಡಿದರು.

ಈ ಸಮಯಕ್ಕೆ ತಾಯಮ್ಮನಾದರೂ ತನು ಶ್ರಮಬಡಲಿಲ್ಲ. ರಾತ್ರಿಯ ವೇಳೆಯಲ್ಲಿ ಶಾಸ್ತ್ರಿಗಳ ಒಂದು ಬದಿಗೆ ಮಾಯಾವತಿಯು ಮತ್ತೊಂದು ಬದಿಗೆ ಮಧುಸೂದನನು - ಈ ಪರಿಯಾಗಿ ಶುಶ್ರೂಷೆಯಾಗುತ್ತಿತ್ತು; ಮಧ್ಯರಾತ್ರಿಯಲ್ಲಿ ತಾಯಮ್ಮನು ಒಂದು ಅಂಜುತ್ತ "ಒಡತೀ, ನಾನು ತನು ಹೊತ್ತು ಕೂಡಲೇ?" ಎಂದು ಕೇಳುತ್ತಿದ್ದಳು. ಜೋಡಿಗೆ ಮಾಯಾವತಿಯು ಇದ್ದರೆ ಅವಳಿಗೆ ತಪ್ಪದೆ ನಿದ್ದೆ ಬರುತ್ತಿತ್ತು. ಜೋಡಿಗೆ ಮಧುಸೂದನನು ಇದ್ದರೆ ಅವಳು ಮಲಗುವದಾದರೂ ಹೇಗೆ?

ಮರಣವು ಸಮೀಪಿಸಿತೆಂದು ತಿಳಿದು ಶಾಸ್ತ್ರಿಗಳು ತೀವ್ರವೇ ಜಯರಾಯರ ಅಪ್ಪೇಸ್ಟ್ಟರನ್ನು ಕರೆತಂದು ಏನೋ ಒಂದು ಯೋಜನೆಯನ್ನು ಮಾಡಿದರು. ಮರುದಿನದಿಂದ ಶಾಸ್ತ್ರಿಗಳ ಮನೆಗೆ ಸುಣ್ಣ,ಬಣ್ಣ, ತಳಿರು ತೋರಣಗಳಿಂದ ಹೊಸ ಶೋಭೆಯೇ ಬರಹತ್ತಿತು. ಏನಿರಬಹುದು? ಇದೆಲ್ಲ ಗದ್ದಲದಲ್ಲಿ ತಾಯಮ್ಮನು ಕಾಣುವದಿಲ್ಲ, ಅವಳ

ಹಾಸಿಗೆಯೂ ಕಾಣುವದಿಲ್ಲ; ಶಾಸ್ತ್ರಿಗಳ ಮನೆಯಿಂದ ಅವಳು ಹೊರಟಂತೂ ಹೋಗಿರುವಳು. ಊರೊಳಗಿನ ಜನರು ಮಾಯಾವತಿ ಮಧುಸೂದನರ ಮದುವೆಯ ಮಾತೇ ಆಡುತ್ತಿರುವರು. ಇಂಥ ಶುಭ ಪ್ರಸಂಗದಲ್ಲಿ ತಾಯಮ್ಮನೆಲ್ಲಿ ಹೋಗಿರುವಳು? ಏನಿರಬಹುದು?

* * * * *

ಶಾಸ್ತ್ರಿಗಳ ದೇಹಾವಸಾನವಾಗಿ ಈ ಹೊತ್ತಿಗೆ ನಾಲ್ಕು ತಿಂಗಳುಗಳಾದವು. ಈ ಹೊತ್ತು ಮಧುಸೂದನನು ಎಲ್ಲರ ಮೇಲೆ ಸಿಟ್ಟಿಗೆದ್ದನು. ಅವನ ಬಳಿಯಲ್ಲಿದ್ದ ಜಯರಾಯರದೊಂದು ತಸಬೀರು ಸಿಗದಂತಾಗಿತ್ತು. "ತಾಯಮ್ಮನು ತೆಗೆದುಕೊಂಡು ಹೋಗಿಲ್ಲವಷ್ಟೇ!" ಮಾಯಾವತಿಯು ನಕ್ಕಳು.

ಕಡೆಗೆ ಅದೇ ತಸಬೀರನ ಮತ್ತೊಂದು ಪ್ರತಿ ಶಾಸ್ತ್ರಿಗಳ ಪೆಟ್ಟಿಗೆಯಲ್ಲಿತ್ತು. ಅದನ್ನು ನೋಡಲಾಗಿ ಅದು ಸಿಕ್ಕಿತು. ಜಯರಾಯರು ಈ ತಸಬೀರನ್ನು ತಮ್ಮ ತಾರುಣ್ಯದಲ್ಲಿ ತೆಗೆಸಿದ್ದರು. ಪಿತಾಪುತ್ರರ ನಡುವೆ ಬಹಳ ಸಾದೃಶ್ಯವಿದ್ದದರಿಂದ ತಸಬೀರು ಮಧುಸೂದನನದೆಂದೆ ಗ್ರಹಿಕೆಯಾಗಿತ್ತು.

* * * * * * *

ಅದೇ ಪೆಟ್ಟಿಗೆಯಲ್ಲಿ ಒಂದು ಪತ್ರವು ಸಿಕ್ಕಿತು.

ಮಗಳೇ, ಶಾಕುಂತಲದಲ್ಲಿಯ ಆ ಪ್ರಸಂಗವು ನಿನ್ನ ನೆನಪಿಗೆ ಬರುವದೋ? ಭಗವಾನ್ ಕಾಶ್ಯಪನು ಶಕುಂತಲೆಗೆ–

ತನಯಮಚಿರಾತ್ಪ್ರಾಚೀವಾರ್ಕಂ ಪ್ರಸೂಯ ಚ ಪಾವನಂ
ಮಮ ವಿರಹಜಾಂ ನ ತ್ವಂ ವತ್ಸೇ ಶುಚಂ ಗಣಯಿಷ್ಯಸಿ ||

ಎಂದು ಹೇಳುವನು. ನಾನಾದರೂ ನಿನಗೆ ಅದೇ ಹೇಳಬೇಕಾಗಿದೆ. ನಿನಗಾಗಿ ನಾನು ಮಾಡತಕ್ಕ ಎಲ್ಲ ಕರ್ತವ್ಯವನ್ನೂ ಮಾಡೇ ಇರುತ್ತೇನೆ. ಇನ್ನು ತಾಯಮ್ಮನ ವಿಷಯವಾಗಿ ಹೇಳುತ್ತೇನೆ. ಅವಳಿಗಾಗಿ ನಾನು ೫೦೦ ರೂಪಾಯಿಗಳನ್ನು ತೆಗೆದಿಟ್ಟಿರುವೆನು.

ಇವುಗಳನ್ನು ಅವಳಿಗಾಗಿ ವೆಚ್ಚ ಮಾಡು. ಒಬ್ಬ ಅನುರೂಪ ವರನನ್ನು ನೋಡಿ ಅವಳನ್ನು ಮದುವೆ ಮಾಡಿಕೊಡು. ಆ ದಾಂಪತ್ಯವು ನಿನ್ನ ಹತ್ತಿರ ಇರುವಂತೆ ಮಾಡು. ಇದಕ್ಕೂ ಹೆಚ್ಚಿಗೆ ಏನು ಹೇಳುವದು ?

ವಿಶ್ವೇಶ್ವರ

* * * * * * *

ವರ್ತಮಾನಸಾರ– "ಮೊನ್ನೆ ಪಂಢರಪುರದ ದಾರಿಯಲ್ಲಿ ಒಂದು ಅನಾಥ ಪ್ರೇತವು ಸಿಕ್ಕಿರುವದು. ಈ ಪ್ರೇತವು ಹೆಂಗಸಿನದಿದ್ದು ಮರಣದ ಕಾರಣವು ಉಪವಾಸವೆಂದು ಹೇಳುತ್ತಾರೆ. ಪ್ರೇತದ ಹತ್ತರಿದ್ದ ಜೋಳಿಗೆಯಲ್ಲಿ ಎರಡು ದುಡ್ಡು, ನಾಲ್ಕು ಭಕ್ಕರಿ ತುಣುಕುಗಳು, ಒಂದು ಎಣ್ಣೆಯಲ್ಲಿ ಮುಳುಗಿದ ತಸಬೀರು ಇಷ್ಟೇ ಇದ್ದವು. ಆ ತಸಬೀರಿನ ಗುರುತು ಹತ್ತಲಿಲ್ಲ."

## ಡಾ. ರಂಗರಾಯರು ಹಿರೇಹಳ್ಳಿಗೆ ಹೋಗುವರು

ಡಾ. ರಂಗರಾಯರು ತಮ್ಮ ಊರಾದ ಹಿರೇಹಳ್ಳಿಯನ್ನು ಬಿಟ್ಟು ಈಗ ಮೂವತ್ತು ವರುಷಗಳಾಗಿದ್ದವು. ಪರೀಕ್ಷೆ ಕೊಟ್ಟಮೇಲೆ ಒಂದೆರಡು ವರುಷ ಸರಕಾರಿ ನೌಕರಿ ಮಾಡಿ ಆ ಮೇಲೆ ಸ್ವತಂತ್ರ ದವಾಖಾನೆ ತೆಗೆಯಬೇಕೆಂದು ಮಾಡಿದಾಗ ಅವರಿಗೆ ಮುಂಬೈಯಲ್ಲಿಯ ಕಾಲೇಜಿನಲ್ಲಿ ಕೆಲಸ ಮಾಡಬೇಕಾಯಿತು. ಆಗ ಅಲ್ಲಿಯ ಒಬ್ಬ ವಕೀಲರ ಮಗಳನ್ನು ಮದುವೆಯಾದರು. ತಂದೆತಾಯಿಗಳು ಮೊದಲೆ ತೀರಿಕೊಂಡಿದ್ದರು. ಇನ್ನಾರೂ ಹೆತ್ತಿದವರೂ ಹೊಂದಿದವರೂ ಊರಲ್ಲಿ ಉಳಿದಿರಲಿಲ್ಲ. ಊರಿಗಾದರೂ ಹೋಗಿ ಮಾಡುವದೇನು !- ಮುಂಬೈಯಲ್ಲಿಯೆ ದವಾಖಾನೆಯನ್ನು ತೆಗೆದು ವ್ಯವಸಾಯವನ್ನು ಅಲ್ಲಿಯೆ ಪ್ರಾರಂಭಿಸಿದರು.

ಪ್ರತಿದಿನ ಬೆಳಿಗ್ಗೆ ದವಾಖಾನೆಗೆ ಹೋಗುವದು, ರೋಗಿಗಳ ಬೇನೆಯ ಪುರಾಣ ಕೇಳುವದು, ಔಷಧ ಯೋಜನೆ ಮಾಡುವದು, ರೋಗಿಗಳಲ್ಲಿ ವಿಶೇಷ ಬದಲು ಕಾಣಬರದಿದ್ದರೆ—ಪ್ರತಿದಿನಕ್ಕೆ ಅದೇನು ಬದಲು ಕಾಣಬೇಕು. !-.ct mixt (ನಿನ್ನೆಯ ಔಷಧವನ್ನೆ ಸಾಗಿಸಿರಿ)

ಎಂದು ಬರೆಯುವದು – ಅದೇ ಅದೇ ಔಷಧ, ಅದೇ ಅದೇ ಅನುಪಾನ – ಅಂತೂ ಅವರ ದಿನಚರಿಯಲ್ಲಿ ಬದಲು ಎಂಬುದರ ಸುದ್ದಿಯಿರಲಿಲ್ಲ. ಚಿಕ್ಕ ಮಕ್ಕಳಿಗಾಗಿ ಅವರು ಕೆಲವು ಮಾತುಗಳನ್ನು ಮಾಡಿಟ್ಟಿದ್ದರು. ಯಾವದಾದರೊಂದು ಮಗು " ಡಾಕ್ಟರ್, ಹೊಟ್ಟೆ ಕಡೀತದರಿ " ಎಂದು ಬಂದರೆ " ಕಡೀತದ ? ಯಾಕ ? ಹುಚ್ಚು ಹಿಡದದೇನು ಅದಕ್ಕ ? " ಎಂದು ಅವರನ್ನು ರೇಗಿಸುತ್ತಿದ್ದರು. ದೊಡ್ಡವರು ಯಾರಾದರೂ ಅಗ್ನಿಮಾಂದ್ಯಕ್ಕಾಗಿ ಔಷಧ ಬೇಕೆಂದು ಬಂದರೆ ಅವರಿಗೆ ಔಷದ ಕೊಟ್ಟು " ಈ ಔಷಧ ತಗೊಂಡಾರೆ ನೋಡ್ರಿ. ನಾಳೆ ಥೇಟರಿನ್ಯಾಗ ನಿಮ್ಮ ಕಡಿಂದ ಕಾಜು, ಮಳಿ ತಿನಿಸಿ ತೋರಿಸ್ತೇನಿ ! " ಎಂದು ಹೇಳುತ್ತಿದ್ದರು. ಅವರ ಪಥ್ಯ-ವಿಚಾರವಂತೂ ಅಪೂರ್ವವಿತ್ತು. ವರ್ಜ್ಯಪದಾರ್ಥಗಳಲ್ಲಿ ತಗಣಿ, ಚಿಕ್ಕಾಡ, ಕಟ್ಟಿಗೆ, ಪುಸ್ತಕ ಮುಂತಾದವುಗಳಿರುತ್ತಿದ್ದವು. ಶಾಲೆ ಕಾಲೇಜುಗಳಲ್ಲಿ ಕಲಿಯುವ ಹುಡುಗರಿಗೆ " ಪುಸ್ತಕ ತಿನಬ್ಯಾಡ್ರಿ* " ಎಂದು ಹೇಳುವದು ನಿತ್ಯದ್ದಾಗಿತ್ತು. ರೋಗಿಗಳು ಸಿರಿವಂತರೆ ಇರಲಿ ಬಡವರೆ ಇರಲಿ ಎಲ್ಲರನ್ನು ಒಳ್ಳೇ ಆಸ್ಥೆಯಿಂದ ನೋಡುತ್ತಿದ್ದರು. ಸದಾ ನಗೆಮೊಗ. ರೋಗಿ ಜನರಿಗೆ ಒಂದು ವಿಶ್ವಾಸ ಹುಟ್ಟುತ್ತಿತ್ತು ಅವರಲ್ಲಿ.

ಒಂದು ದಿನ ಈ ನಿತ್ಯಕ್ರಮ – ಈ ಎಂದೂ ಬದಲಾಗದ ದಿನಚರಿ- ಎಲ್ಲವೂ ಬೇಡವಾಯಿತು. ವಿಶ್ರಾಂತಿಗಾಗಿ ಏನೋ ಎಲ್ಲಿಯಾದರೂ ಹೋಗಿ ಬರಬೇಕೆಂದು ಹವಣಿಸಿತು ಜೀವ. ಎಲ್ಲಿ ಹೋಗಬೇಕು ? ತಮ್ಮೂರಲ್ಲಿ ಆಪ್ತೇಷ್ಟರು ಯಾರಾದರೂ ಇರುವರೊ ಏನೊ ಎಂದು ನೋಡಿದರು. ಕೊನೆಗೆ ನೆನಪಾಯಿತು. ಒಬ್ಬ ಸೋದರತ್ತೆಯಿದ್ದಳು. ಈಗ ಜೀವದಿಂದಿರಬಹುದೊ ಇಲ್ಲವೊ ಗೊತ್ತಿರಲಿಲ್ಲ. ಆದರೂ ಒಮ್ಮೆ ಹೋಗಿ ಬಂದರಾಯಿತು – ಮೊದಲು ಒಬ್ಬರೆ ಹೋಗಬೇಕು – ಮುಂದೆ ಎಂದಾದರೂ ಮನೆಯವರನ್ನೆಲ್ಲರನ್ನೂ ಕರಕೊಂಡು ಹೋದರೆ ಬಂದೀತಂತೆ ಎಂದು ವಿಚಾರ ಮಾಡಿದರು.

---

* ಇದು Book worm ಎಂಬ ಶಬ್ದದ ಮೇಲೆ ಹಾಕಿದ ಕೋಟಿ

ಡಾಕ್ಟರರು ವಿಶ್ರಾಂತಿಗಾಗಿ ಹಿರೇಹಳ್ಳಿಗೆ ಹೊರಟರು. ರೋಗಿಗಳ ಮೇರೆ ನಾಲ್ಕು ದಿನಗಳ ಮಟ್ಟಿಗಾದರೂ ತಪ್ಪೀತೆಂಬ ಆಶೆ ಬಲವಾದುದು !

* * * * *

ಸ್ಟೇಶನ್ನಿನ ಊರಿನಿಂದ ಹಿರೇಹಳ್ಳಿ ಸುಮಾರು ೪-೫ ಹರದಾರಿ ಇದ್ದಿರಬೇಕು. ಊರ ಹತ್ತರದಿಂದ ದಿನಾಲು ಹೋಗುವ ಮೋಟಾರು ನಿಲ್ಲುವ ಸ್ಥಳವೆಂದರೆ ಸುಂಕದ ಕಟ್ಟೆ. ಅಲ್ಲಿಂದ ಕಾಲದಾರಿಯಿಂದ ಒಂದು ಮೈಲು, ಕಲ್ಲು ಮುಳ್ಳು ತುಳಿಯುತ್ತ ಹೋಗಬೇಕು. ಈ ಪ್ರವಾಸ ಮಾತ್ರ ಡಾಕ್ಟರರ ಉತ್ಸಾಹವನ್ನು ಕುಗ್ಗಿಸಲಾರಂಭಿಸಿತು. ಮುಂಬೈಯಲ್ಲಿ ಮನೆಯಿಂದ ದವಾಖಾನೆ ನಾಲ್ಕೇ ಹೆಜ್ಜೆ, ಆದರೂ 'ಕಾರಿ'ಲ್ಲದೆ ಅಡ್ಡಾಡಿದವರಲ್ಲ. ಈಗ ಈ ಕಲ್ಲು ಮುಳ್ಳು ಎಂದರೆ ಅದೇನೊ ಗರುಡ ಪುರಾಣದಲ್ಲಿ ಹೇಳುತ್ತಾರಲ್ಲ ಅಂಥ ದಾರಿಯಾಯಿತು.

ಊರು ಯಾವ ರಾಮರಾಜನ ಕಾಲದಲ್ಲೊ ಧರ್ಮರಾಜನ ಕಾಲದಲ್ಲೊ ರಾಜಧಾನಿಯಾಗಿದ್ದೀತು. ಈಗ ಹಾಳೂರು. ಎಲ್ಲೆಲ್ಲಿಯೂ ಅಗಸೆಗಳು, ಬಿದ್ದ ಗೋಡೆಗಳು.

ಅಂತೂ ಡಾಕ್ಟರರು ಊರಿಗೆ ಬಂದು ಮುಟ್ಟಿದರು. ಇನ್ನು ಮುಟ್ಟಬೇಕಾದ ಮನೆ, ಕಾಣಬೇಕಾದ ಜನ. ಅವರ ಸೋದರತ್ತೆ ಒಳ್ಳೇ ಹಣ್ಣಾದ ಮುದಿಕೆ. ಆಕೆಯ ಮಗ– ವಯಸ್ಸು ೪೦; ಇಷ್ಟು ಹೇಳಬಹುದಾದ ಸಂಗತಿ. ಆತನ ಹೆಂಡತಿ– ಏಳು ಮಕ್ಕಳ ತಾಯಿ– ಇದೇನು ನಾವು ಹೇಳುತ್ತೇವೆ ! अनिर्वर्णनीयं नाम परकलत्रम् !– ಪಾತ್ರ ಪರಿಚಯವು ಇಷ್ಟಕ್ಕೆ ಸಾಕು. ಕೆಳಗಿನಂತೆ ಸಂಭಾಷಣೆ ಏನೊ ಆಗಿರಬೇಕು.

ಮನೆಯ ಮುದುಕೆ:-- ಹೂಂ– ಮಲಗ್ರಿನ್ನ – ಆತೊ ಇಲ್ಲೊ ಕೂಳು ? – ಇನ್ನ್ಯಾಕ ಆಶಾ !– ಖೋಡಿಗೋಳು ಮನ್ಯಾಗ ಏನಾದರ ಮಾಡಿತೊಂದ್ರ ಕಣ್ಣಾಗಿಟ್ಟು ಹೀರತಾವ. ಏ ಕ್ರಿಷ್ಟೀ, ನೀ ಈಗ ಸಣ್ಣಾಕಿ ಅಲ್ಲ. ಹೋಗು – ಹಾಸಿಗೀ ಹಾಸಿ ಕೆಡವಿವನ್ನ ಎಲ್ಲಾ ದಂಡು–(ಹೊರಗೆ ಕಟ್ಟೆಯ ಮೇಲೆ ಯಾರೊ ಬಂದಂತೆ ಸಪ್ಪಳ ) ಯಾರ ಬೇಕರೆಪ್ಪಾ

ಡಾಕ್ಟರರಿಗೂ ಈ ಎಲ್ಲ ಸಂಗತಿ ಹೊಸದಿತ್ತು. ಅವರು ಮುಗುಳ್ನಗೆ ನಗುತ್ತ ನದಿಯ ಕಡೆಗೆ ನಡೆದರು.

ಎಷ್ಟೋ ವರ್ಷಗಳನಂತರ ಅವರು ತಮ್ಮ ಹುಟ್ಟಿದೂರಿಗೆ ಬಂದಿದ್ದರು. ಹಳ್ಳಿಯ ಜೀವನದಲ್ಲಿಯ, ಹಳ್ಳಿಯ ಸಮಾಜದ ಮನಃಪ್ರವೃತ್ತಿಗಳ ಆಳವು ಅವರಿಗೆ ಗೊತ್ತಿರಲಿಲ್ಲ. ಆದರೂ ನಿಸರ್ಗದ ಈ ನಿಕಟ ಸಾನ್ನಿಧ್ಯದಿಂದ ಮನಸು ಪ್ರಸನ್ನವಾಗದಿರಲಿಲ್ಲ. ತುಸು ಹೊತ್ತು ನದಿಯ ದಂಡೆಯ ಮೇಲೆ ಅತ್ತಿತ್ತ ಕಳೆದು ಮನೆಗೆ ಬಂದರು.

ಮನೆಯ ಕಟ್ಟೆಯ ಮೇಲೆ ಅವರ ಭೆಟ್ಟಿಗಾಗಿ ೭।೮ ಜನ ಬಂದಿದ್ದರು. ಒಳಗೆ ಚಹಾದ ಪುರಸ್ಕಾರ ನಡೆದಾಗ ಒಬ್ಬಿಬ್ಬರು ಹೆಣ್ಣುಮಕ್ಕಳೂ ಬಂದಿದ್ದರು. ಮುದಿಕೆ ಹೇಳಿದಳು "ರಂಗಣ್ಣಾ, ನಮ್ಮ ಭಾಗವ್ವನ ನೋಡಿ——ಮೋಟ ಮುದಿನ್ಯಾಗೇದಾಗೇದ ಪ್ರಾಯಸ ಹಿಡಿ ಬಿಲ್ಲು — ಅವ್ವ ನೋಡ್ತೀಯಾ?"

ಡಾಕ್ಟರರು ಸ್ವಭಾವದಿಂದ ಒಳ್ಳೆಯವರು. ಅವರು ಮುದಿಕೆಯ ಒಂದು ಮಾತಿಗೆ '[illegible]' ಯನ್ನು ಕರೆದುಕೊಂಡು ಬರಲಿಕ್ಕೆ ಹೇಳಿದರು. ಆಕೆ ಬಂದಳು. ಡಾಕ್ಟರರು ಆಕೆಯ ಪ್ರಕೃತಿ ನೋಡಿದರು. ಏನೋ ಔಷಧದ ಉಪಚಾರಗಳನ್ನು ಹೇಳಿದರು. ಆಕೆಯ ನಂತರ ಮತ್ತೊಬ್ಬಾಕೆ ಬಂದು ನಿಂತಳು. ಆಕೆ ಅಲ್ಲಿಯೇ ಮರಾಠಿಯಲ್ಲಿರುವ 'ಚಂದ್ರಕ್ಕನ ಮಗಳು.' ಆಯಿತು. ಮುದುಕಿಯ ಬಳಗ ಬೆಳೆಯುತ್ತ ನಡೆಯಿತು. ಮಕ್ಕಳೊಂದಿಗಿದ್ದವರೂ ಮಕ್ಕಳಿಲ್ಲದವರೂ ಮದುವೆಯಾಗದ ಹುಡುಗಿಯರೂ ಎಳೆ ಮಕ್ಕಳೂ ಹಾಗೇ ಒಬ್ಬರ ಹಿಂದೆ ಒಬ್ಬರು ಬರತೊಡಗಿದರು. ವಿಚಿತ್ರದ ರೋಗಗಳು!— ಆ ಎಲ್ಲ ರೋಗಗಳು ಡಾಕ್ಟರರು ಬರುವ ದಾರಿಯನ್ನೇ ಕಾಯುತ್ತ ಕುಳಿತಿದ್ದವೋ ಏನೋ! ಡಾಕ್ಟರರು ಬೇಸತ್ತು ಬೇಜಾರಾದರು. ಆ ಹೆಣ್ಣುಮಕ್ಕಳು ತಮ್ಮ ರೋಗಗಳ ಇತಿಹಾಸದಲ್ಲಿ ಹೇಳುವ ಸಂಗತಿಗಳಲ್ಲಿ 'ದೆವ್ವ' 'ಭೂತ' 'ಘಾತಿ' ಮುಂತಾದ ಅನೇಕ ಮಾತುಗಳು ಬರುತ್ತಿದ್ದರೂ ಕೆಲಸಕ್ಕೆ ಬಾರದ ವಿಷಯಗಳೇ ಹೆಚ್ಚಾಗಿ ಬರುತ್ತಿದ್ದವು ಅವರು ಹಾಗೇ ಹೇಳುತ್ತಿದ್ದರು, ಡಾಕ್ಟರರು ಕೇಳಿಯೇ ಕೇಳುತ್ತಿದ್ದರು. ಒಬ್ಬ ಕುಷ್ಟ ಕುಷ್ಟ

ಮುದಿಕೆ ಬಂದಳು— ಕಣ್ಣು ಕಾಣುತ್ತಿದ್ದಿಲ್ಲ, ಎಡವುತ್ತ ಮುಗ್ಗುತ್ತ ಬಂದಳು " ಹಯ್ಯೋ !- ನಮ್ಮ ದತ್ತಪ್ಪನ ಮಗ ಡಾಕ್ಟರಾಗಿ ಬಂದಾನಂತ- ಆತ ಎಲ್ಲಿದ್ದಾನ ಹೇಳಬಾರದ ನಮ್ಮಪ್ಪಗೋಳರ್‍ಯಾ-"

ಡಾಕ್ಟರರಿಗೆ ಒಳ್ಳೇ ಮೋಜೆನಿಸಿತು. " ಯಾಕ ? ಅಜ್ಜಿ, ನಾ ಇಲ್ಲೇ ಇದ್ದೇನಿ."

" ಇಲ್ಲೇ ಇದ್ದೀಯಾ ನಮ್ಮಪ್ಪಾ— ಅದೇನೊ ಭಾಳ ಭಾಳ ಕಲ್ತ ಬಂದೀ ಅಂತ— ನೋಡು ನಂದೂ ಅಷ್ಟ ಪ್ರಕೃತೀನs—"

" ನಾಕಲ್ಲ ಇನ್ನ ಅಜ್ಜಿ-ವಯಸಾಗೇದ- ದೇವರು ಇನ್ನ ಸುಖದಿಂದಷ್ಟ ಒಯ್ಯಲೀಂತ ಬೇಡಿಕೊಂಬೋದು ಬಿಟ್ಟು—"

" ಅದ್ಯಾಕ ? ನಾಯಾಕ ಹೋಗಲಿ ? ಹೋದವರೇನು ಕಂಡಾರ ?- ನಿಂದರ್‍ರಿ ಚಟಗಾಣೇರ್‍ಯಾ, ಮೊದಲ ನನ್ನ ಪ್ರಕೃತೀ ನೋಡ್ರಿ " ಎಂದು ಮುದಿಕೆ ಎಲ್ಲರನ್ನೂ ಸರಿಸಿ ತಾನು ಮುಂದೆ ಬಂದಳು.

ಡಾಕ್ಟರರು ನಗುತ್ತ ಪ್ರಕೃತಿ ನೋಡಿದರು. " ಏನಾಗೇದ ? ಇನ್ನೂ ಹತ್ತಿಪ್ಪತ್ತ ವರ್ಷ ಏನೂ ಆಗೋದಿಲ್ಲಾ " ಎಂದು ನಕ್ಕರು.

" ನೀವೆಲ್ಲಾ ಬಂದs ಮಾತು ಮಾಡಿಕೊಂಡೀರಿ— ಮುದುಕೀ ಅಂದರ ನಿಮಗ ಹೀಂಗs ಅನಸ್ತದ. " ಎಂದು ವಟವಟಗುಡುತ್ತ ಕುಳಿತಳು.

ಜೀವದಾಸೆ !— ರೋಗಜಂತುಗಳ ಚಿರಂತನ ಜೀವನ ಕಲಹ !- ಎಲ್ಲವನ್ನು ನೋಡಿ ಡಾಕ್ಟರರಿಗೆ ಉಚ್ಚಾಟನೆ ಕೊಟ್ಟಂತಾಯಿತು. ಅಂತೂ ದವಾಖಾನೆ ತಪ್ಪಲಿಲ್ಲ. ನೋಡರತ್ತೆಯು ಮಾತಿಗೊಪ್ಪಿಕೊಂಡು 'ಭಾಗಪ್ಪನ ಸೊಸೆ' ಯನ್ನು ನೋಡಿದ್ದೆ ತಪ್ಪಾಯಿತೆಂದೆನಿಸಿತು.

ಕೆಲವರಿಗೆ ಅಲ್ಲಿಯೆ ಸಿಗುವ ಗಿಡಮೂಲಿಕೆ, ಸಾಸಿವೆ, ಹಸೀಜ ಮುಂತಾದ ನಿತ್ಯೋಪಯೋಗಿ ಸಾಮಾನುಗಳನ್ನೇ ಔಷಧಕ್ಕಾಗಿ ಯೋಜಿಸಿದರು. ರೋಗಿಗಳ ಸಮಾಧಾನವಾದಂತೆ ತೋರಲಿಲ್ಲ. ಮನಸು ತ್ರಸ್ತವಾಯಿತು. ಆ ಮುಂದೆ ಡಾಕ್ಟರರು ಯೋಜಿಸಿದ ಅನುಪಾನ ಪತ್ರಿಕೆಗಳೆಂದರೆ ಅವರ ಕಲ್ಪನಾಶಕ್ತಿಯ ಪರಿಕ್ಷೆಯೆ ಆಗಿತ್ತು.

ಪಾಶ್ಚಾತ್ಯ Materia Medica (ಸುಶ್ರುತ) ದಲ್ಲಿಯ ದ್ರವ್ಯಗಳನ್ನು—ವಿಷಗಳನ್ನು ನಿರಂಕುಶವಾಗಿ ಉಪಯೋಗಿಸಲ್ಪಟ್ಟ ಅನೇಕ ಮಿಶ್ರಣಗಳು ಅವರ ಪತಿಭಾಲಹರಿಯಿಂದುದ್ಭವಿಸಿದವು. ಪ್ರತ್ಯಕ್ಷ ಧನ್ವಂತರಿಯ ಅವತಾರ!— ತಾವು ಯಮರಾಜನ ಪ್ರತಿನಿಧಿಯಾಗಿ ಬಂದಿಲ್ಲವೆಂದು ಡಾಕ್ಟರರಿಗೆ ತಟ್ಟನೆ ನೆನಪಾಯಿತು. ಅವರು ಆ ಪ್ರತಿಯೊಂದು ಅನುಪಾನ ಪತ್ರಿಕೆಯ ಮೇಲೆ “ ಮಿಶ್ರಣವು ತಯಾರಾದ ಮೇಲೆ ಪ್ರತಿ ೪ ತಾಸಿಗೆ ಒಂದೊಂದು ಭಾಗವನ್ನು ಹೊರಗೆ ಚೆಲ್ಲಬೇಕು. ” ಎಂದು ಬರೆದು ಬಿಟ್ಟರು.

—ಅದೇ ಸಂಜೆಗೆ ಡಾಕ್ಟರರು ಮರಳಿ ಮುಂಬೈಗೆ ಹೊರಟರು.

* * * * *

ವ್ಹಿಕ್ಟೋರಿಯಾ ಟರ್ಮಿನಸ್ಸಿನಿಂದ ಡಾಕ್ಟರರು ಮನೆಗೆ ಹೋಗಿ ಮುಟ್ಟಿದಾಗ ಮನೆಯಲ್ಲಿ ಯಾರೂ ಇರಲಿಲ್ಲ. ಹುಡುಗರು ಶಾಲೆಗೆ ಹೋಗಿರಬೇಕು. ಅವರ ಶ್ರೀಮತಿಯವರು ತವರು ಮನೆಗೆ ಹೋಗಿರುವರೆಂದು ಅಡಿಗೆಯವನು ಹೇಳಿದನು. ಅವರು ಚಹಾ ತೆಗೆದುಕೊಂಡು ಅಲ್ಲಿಯೇ ಮೇಜಿನ ಮೇಲೆ ಕೈಯೂರಿ ತಲೆತಗ್ಗಿಸಿ ಕೂತರು. ಪಾವಟಿಗೆಯ ಸಪ್ಪಳವಾಯಿತು. ಎದುರಿನಿಂದ ಒಂದು ದಂಡು—ರೋಗಿಗಳು ಸಾಗಿಬಂದಂತಾಯಿತು. ತ್ರಸ್ತರಾಗಿ ಕೇಳಿದರು —“ ಹಂ-ಜಡ್ಡು ನಿಮಗಾಗೇದೊ ಕೂಸಿಗಾಗೇದೊ! ನಿಮ್ಮ ಹೆಸರು, ವಯಸ್ಸು—” ಎಂದೆನ್ನುತ್ತ ಅನುಪಾನ ಪತ್ರಿಕೆಯನ್ನು ಬರೆಯ ತೊಡಗಿದರು.

“ ಇದೇನು ರೋಗು ” ಎಂದು ಮುಗುಳ್ನಗೆ ನಗುತ್ತ ಯಾರೊ ಒಳಗೆ ಬಂದರು. ಡಾಕ್ಟರರು ಕಣ್ಣು ತಿಕ್ಕಿಕೊಂಡು ನೋಡಿದರು. ಅವರ ಶ್ರೀಮತಿಯವರು! ತಮ್ಮ ತಪ್ಪು ತಿಳಿದ ಕೂಡಲೆ ಅವರಿಗೆ ಹಿಡಿಸಲಾರದಷ್ಟು ನಗೆ ಬಂದು ಬಿಟ್ಟಿತು. ಅವರು ನಕ್ಕುಬಿಟ್ಟರು. ಮನಸು ಹಗುರಾಯಿತು. ಅವರಿಗೆ ಬೇಕಾದ ವಿಶ್ರಾಂತಿ ಸಿಕ್ಕಿತು.

# ಕಿಚ್ಚಿನ ಕಾವಲು

ವೆಂಕಪ್ಪ ದೇಸಾಯರೂ ಮುದ್ದೂರಾಯರೂ ಚಿಕ್ಕಂದಿನಿಂದ ಕೂಡಿ ಆಡಿದವರು. ಬುದ್ಧಿ ಬಲ, ಚುರುಕು, ಗರಡಿಯಾದರೂ ಒಂದೇ. ಆಯಾ ಕಾಲದಿಂದ ಕೋರ್ಟು ಕಚೇರಿಗಳಲ್ಲಿ ನಲಿದಾಡುತ್ತಿರುವ ಬ್ರಿಟಿಶ್ ನ್ಯಾಯದೇವತೆಯನ್ನು ಕುಣಿಸಾಡುವದು ಅವರ ಕೈಯೊಳಗಿನ ಮಾತು. ಊರಲ್ಲಿಯ ಬೇರೆ ಬೇರೆ ತಂಡಗಳ ಪುಂಡಗಳನ್ನು ಹುರಿದುಂಬಿಸಿ ಕಾದು ಬಿಡುವದೂ, ಸೋಲು ಗೆಲುವಿನ ಆಟಕ್ಕೆ ತಾವು ಹೊಣೆಯಾಗದೇ ಪಾರಾಗುವದೂ, ಬಿಚ್ಚಿದ ಕೈಗಳನ್ನು ಮೆಚ್ಚಿನಿಂದ ಮುಚ್ಚಿಸುವದೂ ಆ ವೆಂಕಪ್ಪನಿಗೇ ಗೊತ್ತು, ಆ ಮುದ್ದಪ್ಪನಿಗೇ ಗೊತ್ತು. ಮಹಾರಾಯರ ಮಾಟಕ್ಕೆ ಮರುಳಾಗದವರೇ ಇಲ್ಲ. ಒಬ್ಬ ಪೋಲೀಸನುಳಿಯಲಿಲ್ಲ, ಒಬ್ಬ ವಕೀಲನುಳಿಯಲಿಲ್ಲ ಕೈಗೆ ಬಂದದ್ದೇ ಸದ್ದು, ಹೂಂಽ!

ಒಮ್ಮೆ ದೇಸಾಯರ ದೊಡ್ಡ ರೈತ, ಅವರ ಪರಮ ಶಿಷ್ಯ ರಾಚಯ್ಯ ಒಂದು ಭಯಂಕರ ಕೊಲೆಯ ಪ್ರಕರಣದಲ್ಲಿ ಸಿಕ್ಕಿದ್ದ. ಆತನ ದೆಸೆಯಿಂದ ದೇಸಾಯರು ಸ್ವತಃ ಮುಂಬಯಿಗೆ ಹೋಗಿ ಬ್ಯಾರಿಸ್ಟರನ್ನು ಕರತಂದಿದ್ದರು. ಮುದ್ದೂರಾಯನಂತೂ ಇದ್ದೇ ಇದ್ದ. ಆ ಮೇಲೇನು ಕೇಳುವುದವರ ಕೈಚಳಕದ ಕಸರತ್ತು! ಬಿಡುಗಡೆಯಾಯಿತು. ಜಜ್

ಸಾಹೇಬರು "There were surely giant brains, behind the scene, to work out minutely each detail in this ghastly crime, which still elude the deft arm of law"- "ಕಾಯುದೆಯ ಕೈಯೊಳಿತವನ್ನಿನ್ನೂ ತಪ್ಪಿಸಿಕೊಳ್ಳುತ್ತಿರುವ ಈ ಭಯಂಕರ ಪ್ರಕಾರದ ಪ್ರತಿಯೊಂದು ಇಕ್ಕಟ್ಟನ್ನು ಸೂಕ್ಷ್ಮವಾಗಿ ಯೋಚಿಸಿದ ವಿಶಾಲಬುದ್ಧಿಯುಳ್ಳವರಾರೋ ಈ ಪ್ರಕರಣದ ಬುಡದಲ್ಲಿದ್ದಿರಬೇಕು" ಎಂದು ತಮ್ಮ ನಿರ್ಣಯದಲ್ಲಿ ಬರೆದಿದ್ದರು. ನಮ್ಮ ಮೂಕ ವಿಶ್ವವಿದ್ಯಾಲಯಗಳಿಗೆ ಪ್ರಶಸ್ತಿ ಪತ್ರಿಕೆಗಳನ್ನು ಕೊಡುವದೇ ಗೊತ್ತಿಲ್ಲ.

ಕಾಲದ್ದೆಂಥ ಚಮತ್ಕಾರ! ಕೂಡಿದ ಬಗವು ಬಿಡಿಯಾಗಬೇಕೆ! ದೇಸಾಯರೂ ಮುದ್ದೂರಾಯರೂ ಅಂದಿಗೆ ಇಂದಿಗೆ ಕೂಡಿ ಕೆಲಸಮಾಡಿದವರು. ಒಂದು ಸಣ್ಣ ಮಾತಿಗಾಗಿ ಬಿಡಿದಾಡಿದರು. ವಿಷಯ ಸಣ್ಣದು, ಮಾತು ದೊಡ್ಡದಾಯಿತು. ಮುದ್ದೂರಾಯರ ಆಪ್ತನೊಬ್ಬನಿಗೆ ಸಾಲ ಬೇಕಾಗಿತ್ತು. ಆತನು ಸಾಲದ ಹೊಣೆಗಾಗಿ ಬೇಕಾದ ಹೊಲ ಬರೆದುಕೊಡಲಿಕ್ಕೆ ಸಿದ್ಧನಾಗಿದ್ದ. ಹೊತ್ತೇ ಅಂತಹದು ಬಂದಿತ್ತು. ಆಪ್ತಸ್ವಕೀಯರಲ್ಲಿ ಸಾಲದ ಸೂಕ್ಷ್ಮ ಸಂಬಂಧವಿರಬಾರದೆಂಬದೊಂದು ಮುದ್ದೂರಾಯರ ವ್ಯವಹಾರಸೂತ್ರ. ಸಾಲ ತಾನು ಕೊಟ್ಟರೂ ಮೋರೆ ಬಿಡಲು ಮಾಡುವದಕ್ಕಾಗಿ ಹೆಸರು ದೇಸಾಯರದು ಹೇಳಿದ; ಅವರ ಹೆಸರಲೇ ಹೊಲ ಬರಿಸಿದ. ಮುಂದೆ ಆ ಸಾಲ ಒಯ್ದ ಪುಣ್ಯವಂತ ಸಾಲವನ್ನೂ ತೀರಿಸಲಿಲ್ಲ; ಹೊಲವನ್ನೂ ಕಬ್ಜಾ ಮಾಡಿಕೊಡಲಿಲ್ಲ. ದಿನದಿನಕ್ಕೆ ಬಡ್ಡಿ ಮಾತ್ರ ಬೆಳೆಯುತ್ತ ಬಂದಿತು. ಸಾಮುದಾನಗಳ ಎಲ್ಲ ಪ್ರಕಾರಗಳಾಗಿ ಹೋದವು. ಮುಷ್ಯಸ್ಸರ ಪುಣ್ಯ ಬೆಳೆಯಿತು ಪುಣ್ಯಾತ್ಮ ಹಣಿಯಲಿಲ್ಲ. ಮೂರೂ ಕೋರ್ಟಿನ ಮೆಟ್ಟಿಲುಗಳು ಸವೆದವು. ಹೊಲದ ಕಬ್ಜಾ ಅಂತೂ ಬಂದಿತು. ಬೊಕ್ಕದ ಸರಸುಳಿ ಮಾತ್ರ ಆಯಿತು. ದೇಸಾಯರೇ ಎಲ್ಲ ವೆಚ್ಚ ಮಾಡಿದರು.

ದೇಸಾಯರೂ ಮುದ್ದುರಾಯರೂ ತಮ್ಮತಮ್ಮೊಳಗೆ ಒಂದು ಕರಾರು ಮಾಡಿಕೊಂಡಿದ್ದರು. ವೆಚ್ಚ ಮಾಡಿದ ಹಣ ಮೊದಲು ಮುದ್ದೂ

ರಾಯರು ದೇಸಾಯರಿಗೆ ಕೊಡಬೇಕು ಮತ್ತು ದೇಸಾಯರು ತಾವು ಹಾಕಿದ ಹಣಕ್ಕಂತೂ ಆಯಿತು ಮಾಡಿಸಿದ ಶ್ರಮಕ್ಕಂತೂ ಆಯಿತು ಹೊಲದಲ್ಲಿ ಐದಾಣೆಯಷ್ಟು ಪಾಲು ತಮಗಿಟ್ಟುಕೊಂಡು ಉಳಿದ ಹನ್ನೊಂದಾಣೆಯಷ್ಟು ಪಾಲು ಮುದ್ಗೂರಾಯರಿಗೆ ಬಿಟ್ಟು ಕೊಡಬೇಕು.

ಒಮ್ಮೆ ಮುದ್ಗೂರಾಯ ಏನೋ ಒಂದು ಲಹರಿಗೆ ಬಿದ್ದು ಹೊಲದ ಬಗ್ಗೆ ಕೇಳಿದ. ದೇಸಾಯರು ತಮ್ಮ ಹಣ ಕೇಳಿದರು. ಮೂರು ಸಾವಿರ ರೂಪಾಯಿಗಳ ವಿಷಯ, ಇಂಥ ಎಷ್ಟು ಮೂರು ಸಾವಿರ ರೂಪಾಯಿಗಳನ್ನು ಅವರಿಬ್ಬರೂ ಹಾಳು ಮಾಡಿದ್ದರೋ! ದೇಸಾಯರು ಹಣ ಕೇಳಬಾರದಾಗಿತ್ತು. ಮುದ್ಗೂರಾಯರಾದರೂ ವ್ಯವಹಾರದಲ್ಲಿ ಚೊಕ್ಕಾಗಿರಬೇಕಾಗಿತ್ತು. ಎರಡೂ ಉಕ್ಕಿನ ಒರೆಗಳು. ಸರಿದು ಮಾತಾಡುವವರಾರು !

ವೈಮನಸ್ಯವಂತೂ ಹುಟ್ಟಿಯೇ ಬಿಟ್ಟಿತು. ಒಮ್ಮೆ ದೇಸಾಯರು ಒಂದು ದತ್ತಕ ಪ್ರಕರಣದಲ್ಲಿ ಸಾಕ್ಷಿಗೆ ಹೋದಾಗ ಅವರು ಸುಳ್ಳು ಹೇಳಿದ ಅಪರಾಧಕ್ಕಾಗಿ ಎಂದು ಐದು ನೂರು ರುಪಾಯಿ ದಂಡವಾಯಿತು. ಮುದ್ಗೂರಾಯರ ಲೀಲಾಕೌತುಕ! ಮುಂದೆ ತುಸು ದಿನಗಳಲ್ಲಿ, ಮುದ್ಗೂರಾಯರಿಗೆ ಆರು ತಿಂಗಳ ವಿಸಾಪೂರ ಸಹವಾಸವಾಯ್ತು.

ಊರೊಳಗಿನ ಸಣ್ಣ ಪುಟ್ಟ ತಂಡಗಳೆಲ್ಲ ಮುರಿದು ಎರಡೇ ಎರಡು ತಂಡಗಳು ಕಾಣಹತ್ತಿದವು. ಹೊಲದ ಮಾತಿನ್ನೂ ಮುಗಿದಿರಲಿಲ್ಲ. ಮುದ್ಗೂರಾಯ ಕೋರ್ಟಿನ ಕಟ್ಟೆ ಹತ್ತುವನೆಂದು ಸುದ್ದಿ ಬಂದಿತು. ಶ್ರೀವಿಠ್ಠಲೇಶ ಆದಿಬುನಾದಿಯಿಂದ ದೇಸಾಯರ ಕುಲದೇವರು. ದೇಸಾಯರಿಗೆ ಬಲು ದಿನದಿಂದ ಆತನಿಗೊಂದು ಹರಕೆ ಮುಟ್ಟಿಸಬೇಕಾಗಿತ್ತು. ಯೋಗ್ಯ; ಕುಲದೇವರ ಹರಕೆ ಮೊದಲು ಮುಟ್ಟಿಸತಕ್ಕದ್ದು. ದೇಸಾಯರು ವ್ಯಾಜ್ಯದ ಹೊಲವನ್ನು ಆ ವೈಕುಂಠ ಪತಿಗೆ ಸಮರ್ಪಿಸಿ ತಾವು ಸರಿದುಕೊಂಡರು. ಶ್ರೀಹರೀಗೇ ತನ್ನ ಚಿಂತೆ.

ಕೋರ್ಟಿನಲ್ಲಿ ಪ್ರಕರಣ ನಡೆದು ತ್ರಿಸ್ಥಳದ ಯಾತ್ರೆ ಸಂಪೂರ್ಣ

ವಿಧವೆಯರನ್ನು ಮೊದಲ್ಗೊಂಡು, ಎಪ್ಪತ್ತು ಎಂಬತ್ತು ವಯಸ್ಸಿನ ಮುಪ್ಪಿನ ವಿಧವೆಯರ ವರೆಗೆ ಎಲ್ಲರೂ ತಮ್ಮೊಳಗೇ ಒಬ್ಬರನ್ನೊಬ್ಬರು ಸಂಶಯ ದೃಷ್ಟಿಯಿಂದ ನೋಡಹತ್ತಿದ್ದರು. ಪೋಲೀಸರು ಬಂದು ಪಂಚನಾಮೆಯನ್ನೇನೋ ಮಾಡಿದರು.

ಕೂಸು ಹೆಣ್ಣು. ಹುಟ್ಟಿ ತಿಂಗಳಾಗಿರಬಹುದಷ್ಟೇ. ಹೊಯ್ಯಾಲುಣಿಸಿ ಜೀವಕ್ಕಿಂತ ಹೆಚ್ಚು ಮಾಡಿ ಸಾಕುವವರಾರು! ಊರೊಳಗಿನ ಕಲಾವತಿಯರಲ್ಲೊಬ್ಬಿಬ್ಬರ ಮನಸ್ಸು ಕರಗಿತು. ಪೋಲೀಸರು ಕೂಸನ್ನವರಿಗೊಪ್ಪಿಸಿದಂತೇ ಆಗಿತ್ತು. ದೇಸಾಯರದಕೊಪ್ಪಲಿಲ್ಲ. ಅವರಿಗೂ ಮಕ್ಕಳಿರಲಿಲ್ಲ. ಮನೆಗೊಬ್ಬ ಮಗಳಾದಳು.

* * * * *

ಇತ್ತೀಚೆಗೆ ಬಾಳಮ್ಮನ ( ದೇಸಾಯರ ಸಾಕ ಮಗಳು ) ಹೊರತಾಗಿ ದೇಸಾಯರ ಹೆಜ್ಜೆಯೇ ಸಾಗುತ್ತಿರಲಿಲ್ಲ. ಹಗಲಿರುಳು ಬಾಳಮ್ಮ, ಬಾಳಮ್ಮ ಬೇರೆ ಮಾತೇ ಇರಲಿಲ್ಲ. ಉಂಡುಟ್ಟ ಜೀವಕ್ಕೆ ಅಮೃತ ವೊಂದು ಸಿಕ್ಕಂತಾಗಿತ್ತು. ಬಾಯಿಯವರು ( ದೇಸಾಯರ ಹೆಂಡತಿ ) ತೀರಿಕೊಂಡ ಮೇಲಂತೂ ಕೇಳುವ ಕಾರಣವೇ ಇರಲಿಲ್ಲ. ಅವರಾದರೂ ಬಾಳಮ್ಮನನ್ನು ತಮ್ಮ ಅಂಗೈಯ ಅಲೆಯಂತೆ ಜೋಪಾನ ಮಾಡಿದ್ದರು. ದೇಸಾಯರ ಮೇಲೆ ಅವಳನ್ನು ಸಾಕಿ ಸಲಹುವ ಭಾರವಂತೂ ಬಿದ್ದೇ ಇತ್ತು. ಈಗ ಅವಳ ಮದುವೆಯ ಚಿಂತೆ. ಬಾಳಮ್ಮನ ಜನ್ಮದಿತಿಹಾಸ ಎಲ್ಲರಿಗೂ ಗೊತ್ತಾದದ್ದು. ಸಂಪನ್ನ ಮನೆತನಗಳೇನೂ ಕಡಿಮೆಯಿರಲಿಲ್ಲ. ದೇಸಾಯರ ಸಂಪತ್ತಿನ ಮೇಲಾಶೆಯಿದ್ದರೂ ಸಂಬಂಧ ಮಾಡಿಕೊಳ್ಳುವದು ಸ್ವಲ್ಪ ಕಠಿಣವಾಗಿತ್ತು. ಬಾಳಮ್ಮನ ಬೆಳಿಗೆಯಂತೆ ದೇಸಾಯರ ಚಿಂತೆ ದೊಡ್ಡದಾಗಹತ್ತಿತ್ತು. ಬರಿ ವಿಚಾರದಿಂದೇ ಮಾತು ಮುಗಿಯುವಂತಿರಲಿಲ್ಲ. ಹತ್ತೆಂಟು ಕಡೆಗೆ ಯತ್ನಮಾಡಿ ನೋಡಿದರು. ಎಲ್ಲರೂ ಮೂಗು ಮುರಿಯುವವರೇ. ಒಬ್ಬಿಬ್ಬರಂತೂ ಬಾಳಮ್ಮನ ಜಾತಿ ಯಾವದೆಂದು ಪ್ರಶ್ನೆ ಮಾಡಿದರು. ದೇಸಾಯರು ರೇಗಿದರು. ಬಾಳಮ್ಮನಿಗೆ ತನ್ನ ಜನ್ಮದಿತಿಹಾಸ ಗೊತ್ತಿರಲಿಲ್ಲವಾದರೂ ತನ್ನ ಮದುವೆಯ

ವಿಷಯದಲ್ಲಿ ಏನೋ ತೊಂದರೆ ಬರುತ್ತಿರುವದೆಂಬುದು ಇತ್ತೀಚೆ ಅವಳ ಲಕ್ಷ್ಯಕ್ಕೆ ಬರಹತ್ತಿತ್ತು. ದೇಸಾಯರ ಹೊಂದಿಯ ಮೇಲೆ ದಿನದಿನಕ್ಕೆ ಹೆಚ್ಚುತ್ತಿರುವ ನಿರಾಶೆಯನ್ನು ನೋಡಿ ಅವಳ ಎದೆ ಒಡೆದು ನೀರಾಗುತ್ತಿತ್ತು. ಒಂದು ದಿನ ಅವರು ರೊಚ್ಚಿಗೆದ್ದು "ಯಾವ ಹಾದೀಹೋಗೋ ಕಳ್ಳ ಬರಬಲ್ಲನ್ಯಾಕs. ಕೊಟ್ಟುಬಿಡ್ತೇನಿ" ಎಂದು ಸ್ವಲ್ಪ ಗಟ್ಟಿಯಾಗಿಯೇ ನುಡಿದುಕೊಂಡರು. ಬಾಳವ್ವ ಹತ್ತರ ನಿಂತಿದ್ದು ಅವರ ಲಕ್ಷ್ಯಕ್ಕೆ ಬರಲಿಲ್ಲ. ಅವಳು "ಇದಕ್ಕೂ ಭಾಂವ್ಯಾಗ ಯಾಕ ನುಗ ನೋಡಿಲ್ಲ?" ಎಂದು ಕೇಳಿ ಕರುಣ ದೃಷ್ಟಿಯಿಂದ ನೋಡಿದಳು. ದೇಸಾಯರ ಕಣ್ಣಿಗೆ ಕತ್ತಲೆಯೇ ಕಾಣಹತ್ತಿತು.

* * * * *

ದೇಸಾಯರ ಮನೆಯೆಂದರೆ ದೊಡ್ಡ ಧರ್ಮಶಾಲೆ— ಅನ್ನಛತ್ರ. ಊರಿಗೆ ಬಂದ ಪರಸ್ಥರು, ದೇಶಾವರಿಯವರು, ಹರಿದಾಸರು, ಕೆಲಸದ ನಿಮಿತ್ತ ಬಂದವರು ಎಲ್ಲರೂ ಇಲ್ಲಿಯೆ ಇಳಿದುಕೊಳ್ಳುವ ಪರಿಪಾಠ. ಸಮಾರಾಧನೆ ಹಾಗೇ ನಡೆದಿರುತ್ತಿತ್ತು. ದೇಸಾಯರಿಗೆ ಮನೆಯಲ್ಲಿಯ ಯಾವ ಸುದ್ದಿಯೂ ಗೊತ್ತಿರುತ್ತಿರಲಿಲ್ಲ. ಬಾಯಿಯವರಿದ್ದಾಗ ಎಲ್ಲ ವ್ಯವಸ್ಥೆಯನ್ನು ಅವರೇ ನೋಡಿಕೊಂಡು ಹೋಗುತ್ತಿದ್ದರು. ಅವರ ನಂತರ ಬಾಳವ್ವನಾದರೂ ಮೊದಲಿನಂತೆ ಎಲ್ಲವನ್ನು ನಡೆಯಿಸಿದ್ದಳು. ಅವಳ ಮದುವೆಯ ಮಾತಿನ್ನೂ ನೆನಗುದಿಗೇ ಬಿದ್ದಿತ್ತು.

ಒಂದು ದಿನ ಒಬ್ಬ ಮುದುಕ ಬಾವಾ ಬಂದು ಅವಳ ಕೈ ನೋಡಿ ಏನೇನೋ ಹೇಳಿದ ಆಯಿತು. ಅಂದಿನಿಂದವಳು ಮನೆಯಲ್ಲಿ ವಿರಕ್ತ ಭಾವದಿಂದಲೇ ವರ್ತಿಸಹತ್ತಿದಳು. ತನ್ನ ಕೋಣೆಯಲ್ಲಿಯೇ ಕಾಲ ಕಳೆಯುತ್ತಿದ್ದಳು. ಬಾವಾ ಬಂದರೆ ಆತನನ್ನು, ಮನೆಯಿಂದ ತುಸು ದೂರದಲ್ಲಿದ್ದ ಮಾವಿನ ತೋಪಿಗೆ ಕರೆದೊಯ್ದು, ಅಲ್ಲಿ ಆತನ ಸಂಗಡ ತಾಸು ತಾಸು ಮಾತಾಡುತ್ತ ಕುಳಿತುಕೊಳ್ಳುತ್ತಿದ್ದಳು. ಹೀಗೇ ನಡೆಯಿತು ಕೆಲದಿನ. ಒಂದು ದಿನ ಸಂಜೆಗೆ ಮನೆಬಿಟ್ಟು ಹೋದವಳು

ಭಾವನೆಗಳ ನೆಳವಿನಲ್ಲಿಯೆ ಚಿತೆಯ ಹತ್ತಿರ ಹೋಗಿ "ಮಾರಾಯಾ, ನೀನು ನನಗ ಮಂಣ್ ಕೊಟ್ಟೀ ಅಂತ ಮಾಡಿದ್ನಿ" ಎಂದು ಆರ್ತ ಸ್ವರ ದಿಂದ ಕೂಗಿ ಉರುವಲುಗಳನ್ನೇರಿಸಿದ. ಅಗ್ನಿನಾರಾಯಣನು ಮೆಲ್ಲ ಮೆಲ್ಲನೆ ತನ್ನ ಉಗ್ರಸ್ವರೂಪವನ್ನು ತೋರಹತ್ತಿದನು. ಎಲ್ಲರೂ ಹಿಂದೆ ಸರಿದು ಗುಂಪು ಗುಂಪಾಗಿ ಕುಳಿತುಕೊಂಡರು. ಎಲೆ ಅಡಿಕೆ ಸಿಗರೇಟು ಗಳ ವ್ಯವಸ್ಥೆಯಾಯಿತು. ಆ ಮಾತು ಈ ಮಾತು ನಡೆದವು.

"ನಾರಾಯಣಾ, ಬಾಳಾ, ಇಲ್ಲೆ—ಚಹಾದ್ದೇನಾರs ವ್ಯವಸ್ಥಾ ಆಗ್ತದೇನು ನೋಡತೀಯಾ?" ಒಂದು ಗುಂಪಿನೊಳಗಿನ ಬಕ್ಕತಲೆಯ ಮುದುಕ ಕೇಳಿದ.

"ಇಲ್ಲೇನು ವ್ಯವಸ್ಥಾ ಆಗಬೇಕ್ರಿ! ನಮ್ಮ ಮನೀನs ಇದು?" ಎಂದು ಗುರಗುಟ್ಟಿ ನಾರಾಯಣ ಮುಂದೆ ಸಾಗಿದ. "ಯಾರಿದ್ದೀ ರಪ್ಪಾ ದಕ್ಷಿಣೀಯವರು!" ಎಂದು ಕೂಗಿದ.

ಯಾಚಕರ ದಂಡೇ ಇತ್ತು. ನಾರಾಯಣ ಕೈಗೆ ಬಂದ ನಾಣ್ಯ ವನ್ನು ಕೊಡುತ್ತ ನಡೆದಿದ್ದ. ಯಾಚಕರು ತುಂಬಾ ಸಂತೋಷದಲ್ಲಿ ಮುಳುಗಿದರು. ಈವೊತ್ತು ಸತ್ತ ಮಹಾಪುರುಷ ದಿನವೊಂದಕ್ಕೆ ಸಾಯಲೆಂದು ಪರಮೇಶ್ವರನನ್ನು ಪ್ರಾರ್ಥಿಸಿದರು. ಈ ದಂಡಿನಲ್ಲಿ ಒಬ್ಬ ಫಕೀರ ಚಿತೆಯ ಕಡೆಗೆ ನೋಡುತ್ತ ನಿಂತಿದ್ದ. ನಾರಾಯಣ ಆತನಿಗೂ ಒಂದು ನಾಣ್ಯ ಕೊಡಬೇಕೆಂದು ಕೈಚಾಚಿ "ಓಯ್ ಫಕೀರಸಾಬ್" ಎಂದವನನ್ನು ಎಚ್ಚರಿಸಿದ.

"ಯಹ್ ಕೌನ್ ಧರ್ಮಾತ್ಮಾ ಥಾ!" ಫಕೀರನು ಕೈಯೊಡ್ಡುತ್ತ ಕೇಳಿದ. ಒಡ್ಡಿಯೊಳಗೆ ನಾಣ್ಯಬಿದ್ದಿತು. ಪ್ರಶ್ನೆಗೆ ಉತ್ತರ ಸಿಗಲಿಲ್ಲ. ನಾರಾಯಣ ಯಾವದೋ ಒಂದು ಗುಂಪಿನಲ್ಲಿ ಆಗಲೇ ಸೇರಿ ಬಿಟ್ಟಿದ್ದ. ಮಾದರ ಕರಿಯಾ ಏನೇನೋ ಹೇಳತೊಡಗಿದ. ಫಕೀರನಿಗೆ ಆತನು ಹೇಳಿದ್ದು ತಿಳಿಯಿತೋ ಬಿಟ್ಟಿತೋ!

ಕಿಚ್ಚಿನ ಬೆಂಕಿಯು ಉಕ್ಕೇರಿ ಹೊರಚಲ್ಲಹತ್ತಿತು. ಫಟ್ ಫಟಾ

ಎಂದು ಸಪ್ಪಳವೂ ಕೇಳಬಂದಿತು. ಕೂಡಲೆ " ಅಪ್ಪಣೆಯಂತೂ ಆತು. ಆಚಾರ‍್ರ ನಡೀರಿನ್ನ ಮನೀಗೆ. " ಯಾರೋ ಕೂಗಿದರು.

" ನೀವು ನಡೀರಿ " ಆಚಾರ್ಯರು ಒಂದು ಕಳಗವನ್ನು ತೆಗೆದು ಕೊಂಡು ಕಿಚ್ಚಿನಲ್ಲಿ ಚುಚ್ಚುತ್ತ ಸುತ್ತಲೂ ತಿರುಗಾಡಹತ್ತಿದರು.

" ಮಹಾರಾಯನ ಕಡೀಯ ನೇವಾ- ಇಷ್ಟರಲಬಹಳಲ-" ಎಂದು ಆಚಾರ್ಯರೂ ಹೊರಟರು. ಕರಿಯಾ ಕೇಳಿದ, " ಕರ್ಮಾ ಯಾರ ಹಿಡಿಯಾವರ‍್ರಿ ?—"

" ನಮ್ಮ ರಂಗಪ್ಪನ ಮಗ ಇಲ್ಲಲ,ಆ ಚಿಕ್ಕಪ್ಪಾ-ದೇಸಾಯರಿಗೂ ಮಗನಲ " ಎಂದು ಯಾರೋ ಹೇಳಿದರು.

ಎಲ್ಲರೂ ಹೋದಂತಾಯಿತು. ಫಕೀರ ನಿಂತೇ ಇದ್ದ. ಎಲ್ಲ ಸದ್ದು ಇಲ್ಲದಂತಾದದ್ದನ್ನು ನೋಡಿ ಚಿತೆಯ ಹತ್ತರ ಹೋಗಿ ನಿಂತ.ಮೃಣ್ಮಯ ದೇಹವು ಈಗ ಬೆಂಕಿಯಲ್ಲಿ ಬೆರೆತು ಕುಸಿಬೀಳಹತ್ತಿತ್ತು. ಉರಿಯ ಚಿಗು ರುಗಳು ಅಲ್ಲಲ್ಲಿ ಕುಣಿಯುತ್ತಿದ್ದವು. ಎಷ್ಟೋ ಹೊತ್ತಿನ ಮೇಲೆ ಕಿಚ್ಚು ಶಾಂತವಾಗಬಂದಿತು. ಗಾಳಿಯ ಸುಳಿವಿಗೆ ಬೂದಿ ಹಾರಹತ್ತಿತು. ಫಕೀರನು ಅಲ್ಲಿಯೇ ಬಿದ್ದ ಕಳಗವನ್ನು ತೆಗೆದುಕೊಂಡು ಕಿಚ್ಚಿನ ಬೆಂಕಿ ಯನ್ನು ಸರಿಮಾಡಿ ಅದನ್ನು ಕಿಚ್ಚಿನಲ್ಲಿಯೆ ಒಗೆದುಬಿಟ್ಟ. ಬೆಂಕಿಯು ಉರಿಗಟ್ಟಿತು. ಫಕೀರ ಅದರ ಕಡೆಗೆ ನೋಡುತ್ತ ನಿಂತಿದ್ದ.

# ನೃತ್ಯಾಂಗನೆ

ಚಿತ್ರ ಬರೆಯುವುದೊಂದೇ ಆತನ ವ್ಯವಸಾಯ. ಆತನ ಕೀರ್ತಿಯು ಈವರೆಗಂತೂ ರಾಜಧಾನಿಯ ಹೊಸ್ತಿಲನ್ನು ಕೂಡ ದಾಟಿರಲಿಲ್ಲ. ಹಬ್ಬ ಹುಣ್ಣಿಮೆಯ ದಿನ ಮನೆಗೆ ಸಾಲು ದೇವದೇವತೆಗಳ ಚಿತ್ರಗಳನ್ನು ಬರೆದು ಮಾರಿದರೇ ಆತನ ಜೀವನ ಸಾಗುವಂತಿತ್ತು.

ಚಿತ್ರ ಶಾಲೆಯಲ್ಲಿ ಈ ದಿನ ಒಂದು ಚಿತ್ರವನ್ನು ಬರೆಯುತ್ತ ಕುಳಿತಿದ್ದನು. ಚಿತ್ರವು ಮುಗಿಯುವುದಕ್ಕೆ ಬಂದಿತ್ತು. ಬರೆಬರೆಯುತ್ತ ಮನಸ್ಸಿನಲ್ಲೇನೋ ಬಂದು ವಿಚಿತ್ರ ಕಲ್ಪನೆಯು ಬಂದು ಆತನು ತ್ರಸ್ತನಾದನು. ಆಯಿತು. ಈ ಪ್ರತ್ಯಂಗದ ಕೆಲಸ ಮುಂದೆ ಸಾಗುವ ಹಂಚಿಕೆ ತೋರಲಿಲ್ಲ. ಆತನು ಚಟ್ಟನೆ ಎದ್ದು ಗವಾಕ್ಷದ ಹತ್ತಿರ ಹೋಗಿ ಹೊರಗೆ ಕಾಣುತ್ತಿರುವ ರಾಜಬೀದಿಯ ಕಡೆಗೆ ಶೂನ್ಯದೃಷ್ಟಿಯಿಂದ ನೋಡಹತ್ತಿದನು. ಬೀದಿಯಲ್ಲಿ ಓಡಾಡುತ್ತಿರುವ ಅಸಂಖ್ಯ ಜನಸಂಮುದಾಯವು ಆತನ ಮನಸ್ಸಿನಲ್ಲಿ ಹುಟ್ಟಿದ ಶಂಕೆ ಕುಶಂಕೆಗಳಿಗೆ ಸಮಾಧಾನವೆನಿಸುವಂತೆ ಉತ್ತರ ಕೊಡಲಿಲ್ಲ. ಆತನು ಪುನಃ ಚಿತ್ರದ ವಿಚಾರದಲ್ಲಿ ತೊಡಗಿದನು. ಕುಂಚವನ್ನು ಬಣ್ಣದಲ್ಲದ್ದಿದ್ದಾಯಿತು. ಬಣ್ಣವು ಕುಂಚದ ಮೇಲೇ ಒಣಗಿತು.

ಕ್ಷಣ ಹೊತ್ತಿನಲ್ಲಿ ಮೃದುವಾಗಿ ಪದಶಬ್ದವು ಕೇಳಬಂದಿತು. ಆತನು ಬೆಚ್ಚಿಗೆ ತ್ರಸ್ತನಾಗಿ, " ನಡೆ. ಈಗ ನನ್ನನ್ನು ಕಾಡಬೇಡ " ಎಂದು ನುಡಿದನು. ಈಗ ಬಂದವಳು ಒಬ್ಬ ಹದಿನಾಲ್ಕು ಹದಿನಾರು ವರ್ಷದ ಬಾಲಿಕೆ. ಅವಳು ಆತನೆದುರಿಗೆ ಬಂದು " ಯಾಕೆ! ನನಗಿಂತ ಈ ನನ್ನ ನಿರ್ಜೀವ ಚಿತ್ರದ ಸಹವಾಸವೇ ಬೇಕಾಯಿತಲ್ಲವೇ ! " ಎಂದು

ನುಡಿದು ನಕ್ಕಳು. ಆತನ ಮನಸ್ಸು ಕರಗಲಿಲ್ಲ. ಕೇವಲ ಯಂತ್ರಯೋಜನೆಯಂತೆ ಆತನು ಅವಳನ್ನು ಕೈ ಹಿಡಿದು ಹತ್ತಿರೆಳೆದನು. ಬಾಲಿಕೆಗಷ್ಟೇ ಸಮಾಧಾನವಾಗಿ ಅವಳು ಆತನ ಕೈಯಲ್ಲಿದ್ದ ಕುಂಚವನ್ನು ಲೀಲೆಯಿಂದ ಕಸಿದೊಗೆದು ಅದೇ ಕೈಯನ್ನು ತನ್ನ ತಲೆಯ ಮೇಲಿಟ್ಟುಕೊಂಡಳು. ಆತನ ಮನಸ್ಸು ಸ್ವಲ್ಪ ಸ್ಥಿರವಾದದ್ದನ್ನು ಕಂಡು ನಸುನಕ್ಕು ತಾನು ಬಂದ ಕಾರಣವನ್ನು ಹೇಳತೊಡಗಿದಳು. "ಅಂತೂ ನನಗೆ ರಾಜಸಭೆಗೆ ಹೋಗುವ ಸುಸಂಧಿಯೊದಗಿ ಬಂದಿತು. ನಾಳೆ ಯುವರಾಜರ ವೃದ್ಧಿಮಂಗಲವಂತೆ. ನಾಳೆ ಸಾಯಂಕಾಲಕ್ಕೆ ಮಹಾರಾಜರ ಅಂತರಂಗದ ಸ್ನೇಹಿತರ ಆಗ್ರಹಕ್ಕಾಗಿ ನಾನವರೆದುರಿಗೆ ನನ್ನ ನೃತ್ಯಕೌಶಲ್ಯವನ್ನು ತೋರಿಸುವವಳಿದ್ದೇನೆ."

ಈ ಸುದ್ದಿಯಿಂದ ಆತನ ಮನಸ್ಸು ಸ್ವಲ್ಪ ಶಾಂತವಾದದ್ದೇನೋ ನಿಜ. ಆದರೆ ಅವಳ ವಿಷಯವಾಗಿ ಏನೋ ಸಂಶಯವುಂಟಾಗಿ ತಿರಸ್ಕಾರದಿಂದ ನೋಡಹತ್ತಿದನು. ಅವಳಾದರೂ ತಾನು ಈ ಸುದ್ದಿಯನ್ನು ಹೇಳಬಾರದಾಗಿತ್ತೆಂಬ ಮುದ್ರೆಯಿಂದ ತಲೆತಗ್ಗಿಸಿ ಮಾತಾಡದೆ ಕುಳಿತುಕೊಂಡಳು.

* * * * *

ಆತನು ದರಿದ್ರ. ಅವಳಾದರೂ ದರಿದ್ರಳೇ. ಏನೋ ಕಲೆಯ ಪ್ರೀತಿ-ಸುಲಭವಾದ ಪರಿಚಯ. ಕಾಲಾಂತರದಿಂದ ಈ ಪರಿಚಯಕ್ಕೆ ಮನೋವಿಕಾರದ ಸುಂಕವಂಟಿಕೊಂಡು ಸಂಬಂಧವು ಹೆಚ್ಚು ನಿಕಟವಾಗಿತ್ತು. ಭವಿಷ್ಯತ್ಕಾಲದ ಬಗ್ಗೆ ಇಬ್ಬರದೂ ಅಷ್ಟೇ ಅನಿಶ್ಚಿತ. ಒಬ್ಬರಿಗೊಬ್ಬರು ಧೈರ್ಯಕೊಡುತ್ತ ಮಾರ್ಗಸ್ಥರಾಗಿದ್ದರು.

* * * * * * *

ಮರುದಿನ ಮೊದಲು ಗೊತ್ತುಪಡಿಸಿದಂತೆ ಅವಳ ನೃತ್ಯವಾಯಿತು. ಕೂಡಿದ ಜನರು ತುಂಬಾ ಸಂತುಷ್ಟರಾದರು. ಮಹಾರಾಜರಂತೂ ಬೆಲೆಯುಳ್ಳ ಪಾರಿತೋಷಕಗಳನ್ನು ಕೊಟ್ಟು ಅವಳನ್ನು ಸನ್ಮಾನಿಸಿದರು. ಮೂರನೆಯ ದಿನ ಅವಳು ಮೊದಲಿನಂತೆ ಚಿತ್ರಶಾಲೆಗೆ ಬಂದಳು. ಆದರೆ

ಅವಳ ಮುಖದಿಂದ ತಪ್ಪಿ ಸಹ ರಾಜಸಭೆಯ ಸುದ್ದಿ ಹೊರಡಲಿಲ್ಲ. ಆತನಾದರೂ ಕೇಳಲಿಲ್ಲ.

ಆ ಮುಂದೆ ಅವಳು ಚಿತ್ರಶಾಲೆಗೆ ಮೊದಲಿನಂತೆ ಬರುವದನ್ನೇನೂ ಬಿಡಲಿಲ್ಲ. ಅವಳ ಮುಖದ ಮೇಲೆ ಉದಾಸೀನತೆ ಮಾತ್ರ ಒಡೆದು ಕಾಣಹತ್ತಿತು. ಮಾತಿನಲ್ಲಿ ಮೊದಲಿಣ ಸರಲಭಾವವಿರಲಿಲ್ಲ. ಸ್ವಲ್ಪ ದಿನಗಳಲ್ಲಿ ಅವಳು ಯುವರಾಜರ ವಿಲಾಸದಾಸಿಯಾಗಿ ಅವರ ವಿಶಾಲ ಅಂತಃಪುರವನ್ನು ಸೇರಿದಳೆಂದು ಕೇಳಬಂದಿತು. ಜೀದಿಯಲ್ಲಿಯ ಮಣಿಯು ದೊಡ್ಡವರ ಕೋಶಾಗಾರದಲ್ಲಿ ಸಂಗೃಹೀತವಾಯಿತು.

* * * * * * *

ಆತನ ಭವಿಷ್ಯವಿನ್ನೂ ಸ್ಥಿರವಾಗಿರಲಿಲ್ಲ. ಒಂದು ದಿನ ಆತನಿಗೆ ಅರಮನೆಯಿಂದ ಆಮಂತ್ರಣ ಒಂದಿತು. ಅರಮನೆಯ ಕೆಲವೊಂದು ಭಾಗವನ್ನು ಚಿತ್ರಿಸುವ ಕೆಲಸವಂತೆ. ಈ ಮಹತ್ವದ ಕೆಲಸದ ಭಾರವನ್ನು ವಹಿಸಲಿಕ್ಕೆ ಈ ಮೊದಲು ರಾಜರ ಕೃಪೆಗೆ ಪಾತ್ರರಾದ ಅನೇಕ ಚಿತ್ರಕಾರರು ಅಯೋಗ್ಯರೆಂದು ನಿರ್ಣಯಿಸಲ್ಪಟ್ಟರಂತೆ. ಆತನಿಗೆ ಈ ಕೆಲಸವನ್ನು ಒಪ್ಪಿಸಿದ್ದಾಯಿತು. ಕೀರ್ತಿದೇವಿಗಿಷ್ಟೊಂದು ಬೇಕಿತ್ತು!

* * * * *

ಹತ್ತು ವರ್ಷದ ಕಾಲಾವಧಿಯಲ್ಲೇನಾಗಲಾರದು! ಮೊದಲಿಣ ಚಿತ್ರಶಾಲೆ ಹೋಗಿ ಅಲ್ಲಿ ಈಗೊಂದು ಚಿತ್ರಭವನ ಕಂಡು ಒಂದರಾಶ್ಚರ್ಯವೇ! ಆತನದೇ ಈ ಪ್ರಾಸಾದತುಲ್ಯವಾದ ಮಂದಿರ.

ಒಂದು ಸಾಯಂಕಾಲ ಅರಮನೆಯಿಂದ ಹೊರಟ ಒಂದು ಪಲ್ಲಕ್ಕಿಯು ಈ ಚಿತ್ರಭವನದೆದುರಿಗಿಳಿಯಿತು. ಪಲ್ಲಕ್ಕಿಯಿಂದೋರ್ವ ಸೌಂದರ್ಯಶಾಲಿನಿಯು ಹೊರಬಿದ್ದಳು. ಆತನು ಮನೆಯಲ್ಲಿರಲಿಲ್ಲ. ಸೇವಕರು ಅವಳ ಪರಿವಾರವೈಭವವನ್ನು ನೋಡಿ ಸನ್ಮಾನದಿಂದನಳನ್ನು ಮನೆಯೊಳಗೆ ಕರೆದೊಯ್ದರು, ಒಳಗೆ ಹೋದಕೂಡಲೆ ಅವಳು ತಾನು ಹೊದ್ದುಕೊಂಡ ಜವನಿಕೆಯನ್ನು ದಾಸಿಯು ಕಡೆಗೆ ಕೊಟ್ಟು ಚಿತ್ರಶಾಲೆಯೆಂಬ ವಿಭಾಗದ ಕಡೆಗೆ ನಡೆದಳು,

ಅಲ್ಲಿಯ ವೈಭವವನ್ನು ನೋಡಿ ಅವಳಿಗೆ ಸಂತೋಷವಾಯಿತು. ಚಿತ್ರಶಾಲೆಯಲ್ಲಿಯ ಆ ಚಿತ್ರಸಂಗ್ರಹವನ್ನು ನೋಡಿ ಅವಳ ರಸಿಕತೆಯು ತಲೆದೂಗಹತ್ತಿತು. ಎಷ್ಟೋ ಚಿತ್ರಗಳು ಇನ್ನೂ ಅಪೂರ್ಣಾವಸ್ಥೆಯಲ್ಲಿಯೇ ಇದ್ದವು. ಅವುಗಳಲ್ಲಿ ಕೂಡ ಆತನ ಕೌಶಲ್ಯವು ತಲೆದೋರದಿರಲಿಲ್ಲ. ಮೂಲೆಯಲ್ಲಿ ಕೃಷ್ಣವಸ್ತ್ರದಿಂದ ಹೊಚ್ಚಿಟ್ಟದ್ದೊಂದು ಚಿತ್ರವಿತ್ತು. ಕುತೂಹಲದಿಂದ ಅವಳದರ ಹತ್ತಿರ ಹೋಗಿ ಆ ಹೊದಿಕೆಯನ್ನು ದೂರ ಮಾಡಿದಳು. ಅಹುದು. ಇದು ಅವಳದೇ ಭಾವಚಿತ್ರ. ಹತ್ತು ವರ್ಷಗಳಾಚೆಗೆ ಈ ಚಿತ್ರವಿನ್ನೂ ಅಪೂರ್ಣಾವಸ್ಥೆಯಲ್ಲಿದ್ದಾಗ ನೋಡಿದ್ದು. ಈವೊತ್ತದು ಪೂರ್ಣವಾಗಿತ್ತು. ಈ ಹತ್ತು ವರ್ಷಗಳಲ್ಲಿ ಅವಳಲ್ಲಿ ಒಡೆದು ಕಾಣುವಂತೆ ಯಾವ ಪ್ರಕಾರದ ಬದಲೂ ಕಂಡು ಒರುತ್ತಿರಲಿಲ್ಲ. ಆಗಿದ್ದರೆ ದೇಹವು ಸ್ವಲ್ಪ ಸ್ಥೂಲವಾಗಿರಬಹುದು—ಗತಿಯು ಮಂದಾಲಸ್ಯದಿಂದ ಮಂದವಾಗಿರಬಹುದು—ದೃಷ್ಟಿಯು ವಿಲಾಸದಿಂದ ಜಡವಾಗಿರಬಹುದು.

ಚಿತ್ರದಲ್ಲೊಂದು ನರ್ತಕಿಯು ನರ್ತನದ ಒಂದು ವಿಶಿಷ್ಟವಾದ ನ್ಯಾಸವನ್ನು ತೋರುತ್ತಿದ್ದಳು. ಅಹುದು. ಅದೇ ಸೌಂದರ್ಯ! ಅದೇ ಪ್ರಮಾಣಬದ್ಧತೆ! ಅದೇ ತಾರುಣ್ಯದ ಉನ್ಮಾದ! ಅವಳು ಭಾವವಶಳಾಗಿ ಕೌತುಕದಿಂದ ಆ ಚಿತ್ರದ ಕಡೆಗೆ ನೋಡಹತ್ತಿದಳು. ನೋಡುತ್ತ ನೋಡುತ್ತ ಅವಳ ಎದೆಯು ಧಡಧಡ ಹಾರಹತ್ತಿತು. ಚಿತ್ರಗತಳಾದ ನರ್ತಕಿಯ ಕಣ್ಣುಗಳಲ್ಲಿ ಅತೃಪ್ತ ಕಾಮವಿಕಾರದ ತಾಂಡವ ನೃತ್ಯವೇ ಚಿತ್ರಿತವಾಗಿತ್ತು! ಆ ಭಯಾನಕ ದೃಶ್ಯವನ್ನು ನೋಡಿ ಅವಳು ತಟ್ಟನೆ ಚಿತ್ರಶಾಲೆಯ ಹೊರಗೆ ಬಿದ್ದು ದಾಸಿಯಿಂದ ತನ್ನ ಜವನಿಕೆಯನ್ನು ಸಹ ತೆಗೆದುಕೊಳ್ಳದೆ ದ್ರುತಗತಿಯಿಂದ ಬಂದು ಪಲ್ಲಕ್ಕಿಯಲ್ಲಿ ಕುಳಿತುಕೊಂಡಳು. ವಾಹಕರು ಪಲ್ಲಕ್ಕಿಯನ್ನು ತೆಗೆದುಕೊಂಡು ಪ್ರಾಸಾದದ ದಾರಿ ಹಿಡಿದರು.

ಆಮೇಲವಳೆಂದೂ ಪ್ರಾಸಾದದ ಹೊರಗೆ ಬೀಳಲಿಲ್ಲ.

# ಕಡ್ಡೀ ಆಟ

‘ಅಚಲಾದೇವಿ’ಯು ಕಂಪನಿಯವರು ಇಳಿದುಕೊಂಡ ಮನೆಗೆ ಬಂದಾಗ ಹೊತ್ತು ಏರಿ ಹೋಗಿತ್ತು. ಆಗ ಎಲ್ಲಿಯೋ ಒಬ್ಬೊಬ್ಬರೆ ಹಾಸಿಗೆ ಬಿಟ್ಟು ಏಳತೊಡಗಿದ್ದರು. ಇನ್ನೂ ಪ್ರಾತರ್ವಿಧಿ ಮುಗಿಯಬೇಕು— ಚಹಾ ಮುಗಿಯಬೇಕು. ತಾಲೀಮಿಗೆ ಪ್ರಾರಂಭವಾಗಬೇಕಾದರೆ ಏನಿಲ್ಲವೆಂದರೂ ಒಂದು ತಾಸಿನ ಅವಧಿ. ಒಬ್ಬೊಬ್ಬರಂತೆ ಕೂಡಬೇಕು,-ಕಂಪನಿಯ ಕೆಲಸ. ತಾಸಿನ ಮುಳ್ಳಿಗೆ ಜೋತುಬಿದ್ದು ಅದು ಯಾರು ಮುಂದಾದವರು! ತಾಲೀಮಿಗೆ ಯಾರು ಬರದಿದ್ದರೂ ಕವಿಗಳಿಗದು ಬಿಡದ ಕರ್ಮ—ಬರದೆ ಇದ್ದವರ ಮಾತು ಕವಿಗಳ ಪಾಲಿನವು.

“ಇದೆ ದಿವಸದ ಪ್ಲಾನು” ಎಂದೆನ್ನುತ್ತ ‘ಅಚಲಾದೇವಿ’ಯು ಮ್ಯಾನೇಜರ ತಿಮ್ಮಣ್ಣನ ಕೋಣೆಯ ಕಡೆಗೆ ನಡೆದುಬಿಟ್ಟಳು. ಅಲ್ಲಿ ಕವಿಗಳೂ ಇದ್ದರು. ತಿಮ್ಮಣ್ಣ ಮತ್ತು ಅವರು ಏನೋ ಒಂದು ಮಹತ್ವದ ಮಾತಿನ ಚರ್ಚೆ ನಡೆಸಿದಂತಿತ್ತು. ಆಕೆ ಬಂದಕೂಡಲೆ ಆ ಮಾತು ಅಲ್ಲಿಗೇ ಬಿಟ್ಟು ತಿಮ್ಮಣ್ಣ “ರಂಗಾ, ಬಂದಿಯಾ! ಬಾ. ಯಾಕ ಲಗೂನ ಬಂದಿ ಈವತ್ತು?” ಎಂದು ನಕ್ಕು ಸ್ವಾಗತಿಸಿದ.

“ತಡಾಮಾಡಿ ಬರಬೇಕು, ನಿಮ್ಮ ಕಡಿಂದ ದಂಡಾ ಕಟ್ಟಿಸಿಗೋಬೇಕು. ಯಾರ ಹೇಳಿದ್ದದು?”

ಕರೆಯುವ ಅಧಿಕಾರ ತಿಮ್ಮಣ್ಣನದೊಬ್ಬನದೆ ಆಗಿತ್ತು. ಉಳಿದವರು 'ರಂಗೂಬಾಯಿ' ಎಂದು ಕರೆಯುತ್ತಿದ್ದರು.

ಚಹಾ ಬಂತು. ಆಕೆಯು ಒಳಗೆ ಬಂದಾಗಿನಿಂದ ಕವಿಗಳೂ ಸ್ವಲ್ಪ ಸಂಕೋಚದಿಂದ ಸರಿದು ಕುಳಿತಿದ್ದರು. ಅಲ್ಲಿಯ ಇಲ್ಲಿಯ ಮಾತು ಕಥೆಗಳಷ್ಟು ನಡೆದವು. ಆಕೆ ತಿಮ್ಮಣ್ಣನ ಕೂಡ ಮಾತಾಡುವಾಗ ಕವಿಗಳು ತಪ್ಪಿ ಕೂಡ ಬಾಯಿ ಬಿಚ್ಚಲಿಲ್ಲ. ಅವರ ಈ ಸಂಕೋಚದ ಸ್ವಭಾವವನ್ನು ನೋಡಿ ಅವಳಿಗೆ ನಗು ಬರುತ್ತಿತ್ತು. ಈಗ ಅವರನ್ನು ಮಾತಿನಲ್ಲಿ ಎಳೆಯಬೇಕೆಂದು ಮಾಡಿದಳು.

"ಮೂರನೇ ಅಂಕಿನ್ಯಾಗ ನನಗ ಪದಾ ಆವ ಅಂತ ಗುಣಾ. ಮಾತು ಎಲ್ಲಾ ಮರತsಹೋಗತಾವ. ಅದು ಕಡೀವೇನೊ ಅದನಲ್ಲಾ 'ನಾನು ವಿಧವೆ' ಅಂತೇನೇನೋ, ಅದನಕಾ ಎಷ್ಟು ಪಾಠ ಮಾಡಿದರೂ ನಾರಿಸಿದಾಂಗ ಆಗೇದ ನೋಡ್ರಿ." ಈಗಲೂ ಆ ಮಾತು ಮರತೆ ಹೋಗಿತ್ತೊ ಏನೋ!

ಕವಿಗಳಿಗೆ ತಮ್ಮ ನಾಟಕದ ವಿಷಯವೆಂದರೆ ಪ್ರಿಯ. ಅವರ ನಾಟಕದಲ್ಲಿ ರಂಗೂಬಾಯಿಗೆ ನಾಯಿಕೆಯ ಕೆಲಸವಿತ್ತು. ಅವರು ಈಗ ನೂರಾ ಒಂದನೆಯ ಸಲ, ಮೊದಲಿನ ದಿನ ಹೇಳಿ ತಿಳಿಸಿಕೊಟ್ಟಂತೆ ಹೇಳತೊಡಗಿದರು. "ಕಠಿಣ ಏನದ ಅದರಾಗ? ಟುಕುಟುಕು ಜೀವಿದ್ದಾಗ ಜಸವಂತಸಿಂಗನ್ನ ತರತಾರ ಆಕಿ ಮುಂದ- ಆತನ ಸ್ಥಿತಿ ನೋಡಿ ಯಶೋಮತಿಗೆ ದುಃಖ ತುಂಬಿ ಬಂದು ಆ ಮಾತು ಹೊರಡತಾವ. 'ನಾನು ವಿಧವೆ!- ಭಾರತೀಯ ಸಂಸ್ಕೃತಿಯ ಹೆಗ್ಗುರುತಾದ ಸಂನ್ಯಾಸ,- ಅಸಂಖ್ಯ ಭೋಗಗಳನ್ನು ತಜಿಸಿ ಭಗವಾನ್ ಏಕಲಿಂಗಜಿಯ ಪದಾರವಿಂದದಲ್ಲಿ ಲೀನವಾಗುವ ಯೋಗ! ನಾನು ಧನ್ಯಳು!' ಮುಂದ ಆ ಪದಾ ಅದ. 'ಪಾರ್ಥಿವಕೆ ಪರಮಪದ' ಅಂತ ಆಕಿ ಮನಸಿಗೆ ಸಮಾಧಾನಾ ಹೇಳಿಕೋತಾಳ. ನೋಡ್ರಿ. ಆ ಮಾತು ಈವತ್ತ ಮರತರೀಂದ್ರ ಯುಲ್ಲಾ ಮಣ್ಣುಗೂಡೀತು." ಕವಿಗಳು ಆಕೆಯ ಜವಾಬುದಾರಿಯನ್ನು ಹೇಳಿ ಎಚ್ಚರಕೊಟ್ಟರು. ಆಕೆಯ ಲಕ್ಷ್ಯ ಅವರ

ಮಾತಿನ ಕಡೆಗೆ ಇರಲೆ ಇಲ್ಲ. " ರಾಯರ ಪತ್ರ ಬಂದದೇನು ? " ಆಕೆ ತಿಮ್ಮಣ್ಣನ ಕಡೆಗೆ ತಿರುಗಿ ಕೇಳಿದಳು. ಆಗ ಕವಿಗಳೆಂದರೆ ಕಃಪದಾರ್ಥ! ಕಿವಿಗೆ ಹಿಡಿದ 'ಕಿರಿಕಿರಿ' ಎಂದೆನಿಸಿರಬೇಕು ಆಕೆಗೆ.

" ನಿನ್ನೆ ಸಂಜೆಗೊಂದು ಪತ್ರ ಬಂದದ. ಈವತ್ತ ಸಂಜೀತನಕ ದಾರಿ. 'ನಾಟಕಾ ಅಂತೂ ಸಾಗಿಸರಿ–ನಾ ಎಲ್ಲಾ ತಜವೀಜಿ ಮಾಡೇನಿ' ಅಂತ ಬರದಾರ. " ತಿಮ್ಮಣ್ಣ ರಾಯರ ಪತ್ರವನ್ನು ಕೈಯಲ್ಲಿ ತೆಗೆದು ಕೊಂಡು ನೋಡಿ ಹೇಳಿದ.

" ತಜವೀಜಿ ಅಂದರs ರೊಕ್ಕದ ತಜವೀಜಿ ಬೇಕು. " ರಂಗೂ ಬಾಯಿ ಒಂದು ಠೋಕ ಮಾತು ಹೇಳಿಬಿಟ್ಟಳು.

"ಅದs ಮತ್ತ. ರಾಯರ ಕೂಡ ಅಪ್ಪೂರಾಯರೂ ಬರತಾರ. ಕಂಪನಿ ಬರಿಸಿಕೊಂಡು ಅವರೇನೊ ರೊಕ್ಕಾ ಕೊಡೋವರಿದ್ದಾರಂತ. ಈಗಿನ ಹೊಸ ನಮೂನೇದ ಸಿನೇಮಾದಂಥ ಒಂದೆರಡು ನಾಟಕಾನೂ ಮಾಡಿಕೋಬೇಕು–ಪಡದೇನೂ ಬರಸಬೇಕು ಹೀಂಗಂತಾರಂತ ಅಪ್ಪೂ ರಾಯರು. "

" ನಾಟಕಾತೂ, ಪಡದೆ ಆತು, ನಾಟಕಾ ಆಡೋರಾತು. ನಾಟಕಾ ನೋಡೋ ಜನಾನs ಕೂಳಿಲ್ದ ಸಾವತಾವಂತ. ತಾನs ಬೆಣ್ಣಿ ಕಾಣದ್ದ ಕೂಸಿಗೇನು ಉಣಸೀತೂಂತ ಅಂಬೋದಿಲ್ಲ ! - ರೊಕ್ಕಾ ಹಾಕೋದು ಹಾಕತಾರ, ಇಷ್ಟುಷ್ಟು ಹಾಕಿ ಒಂದು ಸಿನೇಮಾಸರೆ ತಗಿ ಬೇಕು. "

" ಅಷ್ಟ್ಯಾಕ ಹಾಕತಾರ ! ಈಗಿನ ದಿನಮಾನಾ. ಹಾಕಿದ ರೊಕ್ಕ ತಿರಿಗಿ ಬಂದ್ರ ಪುಣ್ಯಾ–ಅಪ್ಪೂರಾಯರೂ ಹುಟ್ಟಾ ಈ ಧಂದೇದಾಗ ಬಿದ್ದ ವರಲ್ಲ. ತಮ್ಮ ಮನಿ ಆತು ತಾವಾತು, ಇಂಥ ಜನ ಅದು– ರಾಯರ ಮಾತಿಗೆ ಒಪ್ಪಿಕೊಂಡದ್ದು ಆಶ್ಚರ್ಯ ಮತ್ತ. "

" ಮುಂದ ಯಾವೂರಿಗೆ ಹಾಕಬೇಕಂತೀರಿ ಕಂಪನಿ ? " ಏನೊ ಒಂದು ಕಲ್ಪನೆ ಬಂದು ಕೇಳಿದಳು.

" ಎಲ್ಲಿಂತೇನು ಹೇಳಲಿ ? ಬೆಂಗಳೂರಿಸಂಥ ಊರಾಗ ಬಂದು

ಕೊಳ್ಳಿಲ್ದೆ ನೋಡತೀವಿ ಈಗ ಈಗ ಎಂಟು ತಿಂಗಳಾತು, ಆ ಗುಬ್ಬಿ ಥೇಟರ ಹಿಡಕೊಂಡ ಮಹಾರಾಯ್ರಾ ಕಾಟದ ನಮ್ಮನ್ನ. ಯಾವದದು ನಾಟಕಾ-'ಕುಂತಿಯ ಮಕ್ಕಳು' ಆ ಕುಂತೀ ಮಕ್ಕಳು ನಮಗ ಮಾತ್ರ ವನವಾಸಾ ಮಾಡಿಸಿದ್ರು." ತಿಮ್ಮಣ್ಣನ ನಗೆಯಲ್ಲಿ ಒಂದು ತೀವ್ರ ನಿರಾಶೆ ಒಡಮೂಡಿತು.

"ಹಾಂಗಾರ ಈವತ್ತಿನ ನಾಟಕಾನೂ ಕಷ್ಟೇನು-" ರಂಗಾ ಬಡವಾದ ದನಿಯಿಂದ ಕೇಳಿದಳು. ತಿಮ್ಮಣ್ಣನಿಗೆ ಆ ಮಾತು ಕೇಳಬಂದಂತೆ ತೋರಲಿಲ್ಲ. ಆತನ ಲಕ್ಷ್ಯನೆಲ್ಲಿತ್ತು ಅದರ ಕಡೆಗೆ!

"ಈವತ್ತಿನ ನಾಟಕಾ! ನಡದದ್ದು ಪತ್ತು. ನಿನ್ನಿನ ನಾಟಕಾನೂ ಈವತ್ತೆ. ರಂಗಾ, ಈ ಮನೀಮತ್ತು ಮಕ್ಕಳದು ಮುಂದೀ ಗೋಳು ನೋಡಲಾರೆ. ಸಣ್ಣ ಸಣ್ಣ ಹುಡುಗರು- ತಾಸಾ ದುಡೀತಾರ ಕೆಲಸ ಬಿದ್ದಾಗ?- ಜಾತ್ರ್ಯಾಗ ಎಂಟೆಂಟುದಿನ ನಿದ್ದೆಲ್ಲಾ ನೀರಡಿಕೆಲ್ಲಾ. ಹಾಂಗೂ ನಾಟಕಾನೂ ನಾಟಕಾ- ಇಷ್ಟು ಮಾಡಿಗೊಂಡು ನೋಡಿದ್ರಕ್ಕ ಹೊಟ್ಟೆ ತುಂಬ ಕೂಳ ಹಾಕೇನಿ, ತಿನಸೇನಿ, ಉಣಿಸೇನೆಂದ್ರ ಗತಿ ಇಲ್ಲ ನಮಗ" ತಿಮ್ಮಣ್ಣನ ಕುತ್ತಿಗೆ ಬಿಗಿದು ಬಂದು ಸುಮ್ಮನಾದ. "ಆ ಕಾಶಾ,-ಆತಗ ಬಹಳ ಜಡ್ಡಾಗೇದ. ನಿನ್ನೆ ಫಾಲನೋಟೀಸ ಇತ್ತಂತ"

"ಕಾಶಾ? ಯಾವ ಕಾಶಾ" ರಂಗಾ ಚಕಿತಳಾಗಿ ಕೇಳಿದಳು.

"ಮತ್ತ ಯಾವ ಕಾಶಾ. ನಮ್ಮ ರಂಗನಾಟೀನ ಹುಡುಗ-ಸಣ್ಣಾಗಿ ಜ್ವರಾ ಬರತಿದ್ದವಂತ ಆತಗ-ನಡವ ನಿಂತಿದ್ದವ್ರ. ಮತ್ತೇನು ತಿಂತೊ ಏನೊ ಮರಕಳಿಸಿತು." ತಿಮ್ಮಣ್ಣ ಅನ್ನುವದಷ್ಟು ಉಳಿದಿತ್ತು.

ತಿಮ್ಮಣ್ಣ ಎಂದೂ ಈ ರೀತಿ ಮನಸನ್ನಿನ ಮಾಡಿಕೊಳ್ಳುವವನಲ್ಲ. ಇಂದು ಆತನಿಗೂ ಎಲ್ಲವೂ ವಿಸಾರಿ ಬಂತು. ರಂಗಾ ಎದ್ದಳು. ಕವಿಗಳು ಯಾವಾಗಲೊ ಎದ್ದು ಹೋಗಿದ್ದರು.

೨

ರಂಗಾ ಅಥವಾ 'ಅಚಲಾದೇವಿ' ಶಿವರಾಯರ ಕಂಪನಿಯನ್ನು ಸೇರಿ ಆರೆಂಟು ತಿಂಗಳುಗಳಾಗಿದ್ದವಷ್ಟೆ. ಆಕೆ ಯಾರು, ಎಲ್ಲಿಯಾಕೆ

ಎಂಬುದು ಯಾರಿಗೂ ಗೊತ್ತಿರಲಿಲ್ಲ. ಆದರೂ ಆಕೆಯ ಪೂರ್ವ ಚರಿತ್ರ ವನ್ನರಿತವರಂತೆ ಹರಟೆ ಹೊಡೆಯುವ ಪುಣ್ಯವಂತರ ಕೊರತೆಯಿರಲಿಲ್ಲ- ಯಾರು ಆಕೆ ಗಂಡನ ಮನೆಯಿಂದ ಓಡಿ ಬಂದ ಗೈಯಾಳಿಯೆಂದು ಹೇಳುತ್ತಿದ್ದರು; ಯಾರು ಆಕೆ ಕುಲಗೆಟ್ಟ ವಿಧವೆಯೆಂದು ಪ್ರತಿಜ್ಞಾ ಪೂರ್ವಕವಾಗಿ ಹೇಳುತ್ತಿದ್ದರು; ಆಕೆ ಕೆಟ್ಟ ನಡತೆಯಾಕೆ ಇದ್ದಿರಬೇ ಕೆಂದು ಎಲ್ಲರೂ ಎನ್ನುತ್ತಿದ್ದರು. ಎಲ್ಲರ ಕೂಡ ಆಕೆಯ ವರ್ತನವು ಮಮತೆಯದಾಗಿತ್ತು. ಸಲಿಗೆ ಮಾತ್ರ ಯಾರ ಕೂಡ ಬೆಳದಿರಲಿಲ್ಲ.

ಶಿವರಾಯರ ಕಂಪನಿಯಲ್ಲಿ ಆಕೆ ಬರಬೇಕಾದರೆ ತಿಮ್ಮಣ್ಣನೆ ಕಾರಣನಾಗಿದ್ದ. ಅವರಿಬ್ಬರ ಪರಿಚಯವೆಲ್ಲಿಯದೆಂಬುದೂ ಯಾರಿಗೂ ಗೊತ್ತಿರಲಿಲ್ಲ. ಆದರೂ ಅವರಿಬ್ಬರ ನಡೆನುಡಿಯಲ್ಲಿ ಅಲ್ಲದ ತರ್ಕಕ್ಕೆ ಆಸ್ಪದವಿರಲಿಲ್ಲ.

ಕಂಪನಿಯು ಬೆಂಗಳೂರಿನ ತುಳಸಿತೋಟ ಥೇಟರಿನಲ್ಲಿ ತಳವೂರಿ ಸುಮಾರಾಗಿ ಎರಡು ತಿಂಗಳಾಗುತ್ತ ಬಂದಿತ್ತು. ಒಳ್ಳೆ ಸುಕಸಾಸ ಬಡೆ ದುಕೊಂಡು ಕೊಡೊತೊಗೊಳ್ಳುವ ವ್ಯವಹಾರದ ಸೂತ್ರ ದಿನದಿನಕ್ಕೆ ಹೆಚ್ಚೆಚ್ಚಾಗಿ ಬಿಗಿಯಾಗಹತ್ತಿತ್ತು. ಕೊನೆಗೆ ತಲೆಕಟ್ಟು ಏನಾದರೂ ರೊಕ್ಕದ ವ್ಯವಸ್ಥೆ ಮಾಡಬೇಕೆಂದು ಶಿವರಾಯರು ಊರಿಗೆ ಹೋಗಿದ್ದರು. ತಿಮ್ಮಣ್ಣ ಗಟ್ಟಿಗನೆಂದೆ ಎಲ್ಲದಕ್ಕೂ ತಲೆಕೊಟ್ಟು ನಿಂತಿದ್ದ.

ರಂಗಾ ಒಳಗೆ ತಾಲೀಮು ನಡೆದ ಹಾಲಿನಲ್ಲಿ ಬಂದಾಗ ಪೇಟಿ ಮಾಸ್ತರರು ಪದದ ತಾಲೀಮು ನಡೆಸಿದ್ದರು. ಉಳಿದವರು ಯಾರೂ ಇರಲಿಲ್ಲ.

"ಮಾಸ್ತರ್ರ, ನಾ ಪದಾ ಎಲ್ಲಾ ಮನ್ಯಾಗ ಅಂದುಕೊಂಡು ಬಂದೇನಿ. ಆದರೂ ಈವತ್ತ ನನ್ನ ಪಾರು ಮಾಡೋದು ಮಾತ್ರ ನಿಮುಗ ಬಿಟ್ಟಿದ್ದಲ್ಲ."

"ಅಂತೂ ನೆಟ್ಟಗದ. ಇಬ್ಬರಿಗೂ ಈಸು ಬರೋದಿಲ್ಲಾ. ಕಣ್ಣು ಮುಚ್ಚಿ ನೀರಾಗ ಬಿದ್ದು ಬಿಡೋಣಾ, ತೀರಿತು" ಮಾಸ್ತರರು ನಕ್ಕರು. ರಂಗಾನೂ ಬಿದ್ದು ಬಿದ್ದು ನಕ್ಕಳು.

ಒಬ್ಬ ಹುಡುಗ ಹಾಯ್ದು ಹೋದ– ರಂಗಾ ಆತನನ್ನು ನಿಲ್ಲಿಸಿ "ಕಾಶಾಗ ಹ್ಯಾಂಗದನೊ?" ಎಂದು ಕೇಳಿದಳು.

"ಓಟ ಬೇಶೈತ್ರಿ ಈಗ."

"ಎಲ್ಲಿ ಮಲಗಿಸೀರಿ ಅವನ್ನ?"

"ಅಲ್ಲೇ ಗ್ರೀಮರೂಮಿನ್ಯಾಗರಿ."

ರಂಗಾ ಗ್ರೀನ್ ರೂಮಿನ ಕಡೆಗೆ ನಡೆದು ಬಿಟ್ಟಳು. ಆಗ ಅಲ್ಲಿ ಒಬ್ಬಿಬ್ಬ ಆಳು ಮನುಷ್ಯರಿದ್ದರು. ರಂಗಾ ಬಂದದ್ದನ್ನು ನೋಡಿ ಮರ್ಯಾದೆಯಿಂದ ಎದ್ದು ನಿಂತರು. ಕಾಶಾ ಅಲ್ಲಿಯೆ ಒಂದು ಮೂಲೆಗೆ ಒಂದು ಕಮಟು ಹಾಸಿಗೆಯ ಮೇಲೆ ನರಳುತ್ತ ಬಿದ್ದಿದ್ದ. ರಂಗಾ ಹಾಸಿಗೆಯ ಹತ್ತರ ಹೋಗಿ ನಿಂತು ಕೂಗಿದಳು "ಕಾಶಾ,–"

ಕಾಶಾ ಪ್ರಯಾಸದಿಂದ ಕಣ್ಣು ತೆರದ.

"ಕಾಶಾ, ಈಗ್ಹ್ಯಾಂಗೈತಿ?"

"ಈಗ ಗುಣಾ ಐತಿ." ಆತನ ತೊದಲು ಮಾತು, ಆ ಲಕ್ಷಣ ನೋಡಿ ಗುಣವಾಗುವ ಬಗ್ಗೆ ಸಂಶಯವೆ ಎಂದು ಸ್ಪಷ್ಟವಿತ್ತು. ಆಕೆಗೆ ಕೆಡಕೆನಿಸಿತು.

"ಗಾಬರ್ಯಾಗ ಬ್ಯಾಡಾ. ನಾವೆಲ್ಲ ನಿನ್ನ ಉಳಿಸಿಗೋತೇವಿ."

"ಹೂಂ-ರಿ—" ಎಂದು ಆತ ಕಣ್ಣು ಮುಚ್ಚಿದ.

ರಂಗಾ ಹೊರಟಳು. ದಾರಿಯಲ್ಲಿ ಆಕೆಗೆ ಕಾಶಾನ ಮೋರೆ ಕಣ್ಣಿಗೆ ಕಟ್ಟಿದಂತಾಗಿತ್ತು.

೩

ಆ ದಿನ ಸಾಯಂಕಾಲದಿಂದಲೆ ಜನರು ಟಿಕೀಟ ಆಫೀಸಿಗೆ ಬಂದು ಮುಕುರಿದ್ದರು. ಗುಬ್ಬಿ ಥೇಟರಿನ ಆಶೆ ಇರಲಿಲ್ಲ. ಇಲ್ಲಿಯೂ ಹೊಸ ನಾಟಕ.

ರಂಗಾ ಥೇಟರಿಗೆ ಬಂದಾಗ ಟಿಕೀಟ ಆಫೀಸು ಬಂದು ಮಾಡಿ ಕೊಂಡು ಹೋಗಿದ್ದರು. ಟಿಕೀಟ ಸಿಗದೆ ಎಷ್ಟೋ ಜನ ಹೊರಗೆ ನಿಂತಿತ್ತು.

ರಂಗಾ ಹಾಗೆ ಜನರನ್ನು ಸರಿಸುತ್ತ ನೆಟ್ಟಗೆ ಗ್ರೀನ್ ರೂಮಿಗೆ ನಡೆದಳು. ಅಲ್ಲಿ ಎಲ್ಲರೂ ಬಣ್ಣ ಹಚ್ಚಿಕೊಳ್ಳುವದರಲ್ಲಿ ತೊಡಗಿದ್ದರು. ಕಾಶಾ ಮಲಗಿಕೊಂಡ ಮೂಲೆಯ ಕಡೆಗೆ ನೋಡಿದಳು. ಹಾಸಿಗೆ ಇರಲಿಲ್ಲ. ಕ್ಷಣಹೊತ್ತು ಆಕೆಗೆ ದಿಗಿಲುಬಿದ್ದಂತಾಯಿತು ಯಾರನ್ನು ಕೇಳಬೇಕು ?

" ಯಾಕ ? ಕಾಶಾ ಹ್ಯಾಂಗಿದ್ದಾನ ? " ಯಾರೂ ಮಾತಾಡಲಿಲ್ಲ. ಆಕೆಗೆ ಏನೊ ಹೊಳೆದಂತಾಯಿತು. ಆದರೂ ವಿಶ್ವಾಸವೆನಿಸಲಿಲ್ಲ.

" ಎಲ್ಲೆ ಮಲಗಿಸೀರಿ ಅವನ್ನ " ಎಂದು ಕೇಳಿ ಸುತ್ತ ನೋಡಿದಳು. ಜಸವಂತಸಿಂಗನ ಪಾತ್ರವಹಿಸಿದ ಚಂದ್ರಶೇಖರ ಮುಂದೆ ಬಂದು ಹೇಳತೊಡಗಿದ. " ಹತ್ತು ಮಿನೀಟಾತ್ರಿ, ಅವ ಹೋಗಿ. ನಾವೂ ತಿರುಗ್ಯಾಡಿ ಬಂದಿದ್ದಿವಿ. ಚನ್ನಪ್ಪ ಓಡ್ತ ಬಂದಾ. ಒಂದು ನೋಡತೇವಿ, ಕಾಶಾ ಕೈಕಾಲು ಜಾಡಿಸಲಿಕ್ಕೆ ಹತ್ತಿದ್ದ. ತಿಳಿದs ಹೋತು ನಮಗ. "

" ಇನ್ನ ಮುಂದ ? "

" ಮುಂದೇನು ? ನಾಟಕಾ ಮುಗಸ್ತಕ್ಕದ್ದು, ಆ ಮ್ಯಾಲೆ ಮುಂದಿನ ವ್ಯವಸ್ಥಾ. "

ಆ ಮಾತು ಕೇಳಿ ಆಕೆಗೆ ಬರೆ ಕೊಟ್ಟಂತಾಯಿತು. ಪಿತ್ತ ತಲೆಗೇರಿತು. " ನೀವು ಮನುಷ್ಯರಲ್ಲ. ರಾಕ್ಷಸರು– ಹೆಣಾ ಇಡಿವಿಕೋತs ನಾಟಕಾ ಮಾಡವ್ರ ? ಓಣ್ಯಾಗ ಯಾರಾರ ಸತ್ತರs ಓಣೀ ಜನಾ ಊಟಾ ಮಾಡೋದಿಲ್ಲಾ, ಹೆಣದ ವ್ಯವಸ್ಥಾ ಆಗದ ಹೊರತು. ಅಷ್ಟು ಮನುಷ್ಯತ್ವ ಇರಬಾರದs ನಿಮಗ ? " ಆ ರುದ್ರಾವತಾರ ನೋಡಿ ಎಲ್ಲರೂ ನಡುಗಹತ್ತಿದರು. " ಯಾರ ಹೇಳಿದ್ರು ನಾಟಕಾ ಮಾಡೋದಂತ ? "

" ಮ್ಯಾನೇಜರರಿ ! " ಟಿಕೀಟ ಮಾರುವ ಶೇಷಪ್ಪ ಹೇಳಿದ. " ಈವತ್ತಿನ ಜನಾ ಅಲ್ಲಾ, ಜಾತ್ರಿ ನೋಡ್ರಿ. ಒಂದು ಟಿಕೀಟೂ ಶಿಲಕಿಲ್ಲ. ಇರಬಿಗೆ ಸರದಾಡೇನಂದ್ರ ಜಾಗಾ ಇಲ್ಲಾ. ಮ್ಯಾನೇಜರ ಅಂದ್ರು ' ರೊಕ್ಕಾ ತಿರಿಗೇನು ಕೊಡೋದು ? ನಾಟಕಾ ಅಂತೂ ಆಡ್ರಿ ' ಅಂದ್ರು. "

" ಹೆಸಾ ಎಲ್ಲಿ ಅದ ಈಗ ?" ಆಕೆಯು ದನಿ ಚಿರಕ್ ಎಂದಿತು.

" ಹೊರಗ ಕೋಲ್ಯಾಗ ಇಟ್ಟೇವರಿ "

" ಆಗಲಿ. ಮೊದಲನೇ ಗಂಟೆ ಹೊಡೆಸುಲಿಕ್ಕೆ ಹೇಳು." ಶೇಷಪ್ಪ ಹೋದ. ಆಕೆಯು ಲಕ್ಷ್ಯ ಆತನ ಕಡೆಗೇ ಇತ್ತು. ಗಂಟೆ ಕೇಳಬಂತು. ಆಕೆ ಬಣ್ಣಾಕ್ಕಾಗಿ ಮೋರೆ ತೊಳಕೊಂಡಳು.

೪

ಮೊದಲನೆಯ ಅಂಕು ಯಥಾತಥಾನೆ ಸಾಗಿತು. ಜನರು ಅದೆ ಕೂಗಾಟಕ್ಕೆ ಪ್ರಾರಂಭ ಮಾಡಿದ್ದರು. ಅಷ್ಟರೊಳಗಾಗಿ ಡ್ರಾಪ್ ಬಿತ್ತು

ರಂಗಾ ಒಳಗೆ ಹೋಗದೆ ಸ್ಟೇಜಿನ ಮೇಲೇ ಉಡುಪನ್ನು ಬದಲಿಸಿದಳು. ತಿಮ್ಮಣ್ಣ ಆಕೆಯನ್ನು ಹುಡುಕುತ್ತ ಬಂದ. ಆತನ ಎರಡೂ ಕಣ್ಣುಗಳಿಂದ ನೀರು ಸುರಿಯುತಿದ್ದವು.

" ರಂಗಾ, ಇಷ್ಟು ಕಟುಕತನ ಮಾಡಬ್ಯಾಡಾ. ನನ್ನ ತಪ್ಪಾತು-ಕ್ಷಮಾಮಾಡು. ನಾನss ಹೇಳಿದೆ ನಾಟಕಾ ಮಾಡೋಣಾ ಅಂತ-ನನಗೂ ಮೋಹ-ಕೈಯಾಗ ಬಂದ ರೊಕ್ಕಾ ಕೊಡಬಾರದು ಅಂತ. ನಿನ್ನ ಕಾಲ ಬೀಳತೇನಿ " ಎಂದು ಗಟ್ಟಿಯಾಗಿ ಆಕೆಯ ಕಾಲ ಹಿಡಕೊಂಡ.

" ಅಣ್ಣಾ, ಹೋಗ್ರಿ ನೀವು- ಏನೂ ತ್ರಾಸ ಮಾಡಿಕೋಬ್ಯಾಡ್ರಿ-" ಇಷ್ಟೇ ಹೇಳಿ ಶೇಷಪ್ಪನಿಗೆ ಒಂದು ಕಪ್ ಚಹಾ ಹೇಳಿದಳು. ತಿಮ್ಮಣ್ಣ ಏನೂ ಮಾತಾಡದೆ ಹೊರಗೆ ಹೋದ.

ಎರಡನೆಯ ಅಂಕಿಗೆ ನಾಟಕವು ಕಳೆಕಟ್ಟಹತ್ತಿತು. ಜಸವಂತ ಸಿಂಗನು ತನ್ನ ಹೆಂಡತಿ ಯಶೋಮತಿಗೆ ರಾಜ್ಯಭಾರವನ್ನೊಪ್ಪಿಸಿ ದಿಲ್ಲಿಗೆ ಹೋಗುವನು- ಆ ಪ್ರವೇಶದಲ್ಲಿ ಆಕೆಯ ಮೋರೆಯ ಮೇಲೆ ಮೂಡಿದ ಆತ್ಮ ವಿಶ್ವಾಸ, ಗಾಂಭೀರ್ಯ- ಒಂದು ರಾಜತೇಜವೆ ಅಲ್ಲಿ ಪ್ರಕಟವಾಗಿತ್ತು— ಜನರು ಚಿತ್ತಸ್ಥಂತೆ ಕೂತು ನೋಡಿದರು.

ಮೂರನೆಯ ಅಂಕೆಂದರೆ ನಾಟಕದ ಮೇರುಮಣಿ- ಜಸವಂತ

ಸಿಂಗನು ಯುದ್ಧದಲ್ಲಿ ಪರಾಜಿತನಾಗಿ ರಣಭೂಮಿಯಿಂದ ಮರಳಿಬರುವನು. ಯಶೋಮತಿಯು ಕೋಟೆಗೆ ಬೀಗ ಹಾಕಿ ಕೊತ್ತಳದ ಮೇಲೆ ನಿಂತಿರುವಳು. ಜಸವಂತಸಿಂಗ ಹೇಡಿ– ಜೀವದಾಸೆಗಾಗಿ ಹೆದರಿ ಕೋಟೆಯಲ್ಲಿ ಅಡಗಿಕೊಳ್ಳಬೇಕೆನ್ನುವನ.– ಜಸವಂತಸಿಂಗ– ಚಂದ್ರಶೇಖರ,– ಹೊಟ್ಟೆ ಹೊರಕೊಳ್ಳುವ ಅಲ್ಪಜೀವಿ– ಕಂಪನಿಯಲ್ಲಿಯ ಎಲ್ಲರೂ ಉಪವಾಸಕ್ಕೆ ಹೆದರಿದರು– ಹೇಡಿಗಳು–!

ಯಶೋಮತಿಯು ಆ ತಿರಸ್ಕಾರವನ್ನು ನೋಡಿ ಜಸವಂತಸಿಂಗನು ನಾಚಿ ರಣಭೂಮಿಗೆ ತೆರಳುವನು. ಎಂಥ ರೋಮಹರ್ಷಣ ಪ್ರಸಂಗವದು! ಜನರಂತೂ ಕರತಾಡನದಿಂದ ಅಭಿನಂದಿಸಿದರು.

ರಣಭೂಮಿಯಲ್ಲಿ ಮಡಿದು ವೀರಸ್ವರ್ಗವನ್ನು ಹೊಂದಿದ ಜಸವಂತಸಿಂಗನ ಪ್ರೇತ– ಯಶೋಮತಿಯು ಬರುವಳು. ಆ ದೃಶ್ಯ– ಭೀಷಣ ಮೃತ್ಯುವಿನ ನರ್ತನ– ಮೃತ್ಯು–ಈಗ ರಂಗಾ ಮೃತ್ಯುವಿನ ಕೈವಶ—

ಯಶೋಮತಿಯ ಮುಖದಿಂದ ಒಂದೆ 'ಚಿತ್ಕಾರ' ಧ್ವನಿ– ಆಕೆ ಮೂರ್ಛಿತಳಾದಳು. ತೆರೆ ಕೆಡವಿದರು.

ರಂಗಾ ನಿಜವಾಗಿಯೂ ಮೂರ್ಛಿತಳಾಗಿದ್ದಳು.

ಮರುದಿನ ಬೆಂಗಳೂರಿನಲ್ಲಿ ಎಲ್ಲೆಲ್ಲಿಯೂ 'ಯಶೋಮತಿ' ನಾಟಕದ ಯಶೋಗಾನವೆ ನಡೆದಿತು. ಆ ಮೇಲೆ ಶಿವರಾಯರು ಎಷ್ಟು ಹೇಳಿದರೂ ರಂಗಾ ಕಂಪನಿಯಲ್ಲಿ ನಿಲ್ಲಲಿಲ್ಲ.

# ಕರ್ಪೂರದ ಗೊಂಬೆ

ಆ ಮಗು ನಮ್ಮೆಲ್ಲರ ಪ್ರೀತಿಯದಾಗಿತ್ತು. ಸ್ನೇಹಿತನ ಮನೆಗೆ ಹೋದೆನೆಂದರೆ ಆತನ ಆ ಹೆಣ್ಣುಮಗುವಿನ ಕೌತುಕವನ್ನೆಷ್ಟು ಮಾಡಿದರೂ ನಮಗೆ ಸಾಲದು. ಹುಟ್ಟಿ ನಾಲ್ಕಾರು ತಿಂಗಳುಗಳ ವರೆಗೇ ಏನೊ ತಾಯಿಯ ತೊಡೆಯ ಮೇಲೆ ಆಡಿರಬಹುದಷ್ಟೆ. ಆ ಮೇಲೇನು ಒಮ್ಮೆ ನಮ್ಮ ಕೈಸೇರಿತು ಅಂದಿನಿಂದ ತಾಯಿಯ ನೆನಪು ಕೂಡ ಮಾಡುತ್ತಿರಲಿಲ್ಲ. ತಂದೆತಾಯಿಗಳು ಹವಣಿಸಿ 'ವಸಂತಿ' ಎಂದು ಗುಜರಾತಿ ಹೆಸರನ್ನಿಟ್ಟಿದ್ದರೂ ಸ್ನೇಹಿತನೊಬ್ಬನು ಆ ಮಗುವಿಗೆ ತನ್ನ ಹೆಸರು ಕೇಳಿದಾಗ "ಮೇರಿ ಮಹಾರಾಣಿ" ಎಂದು ಹೇಳಲಿಕ್ಕೆ ಕಲಿಸಿದ್ದ. ನಾನು ರಾಷ್ಟ್ರೀಯ ವೃತ್ತಿಯವ. ನಾನು ಆಕೆಗೆ ತನ್ನ ಹೆಸರು ಕೇಳಿದಾಗ "ಸರೋಜಿನೀದೇವಿ" ಎಂದು ಹೇಳಲಿಕ್ಕೆ ಕಲಿಸಿದ್ದೆ. ಹಿಂದುಸ್ಥಾನದ ಭಾವೀ ಇತಿಹಾಸವು ಈ "ಸರೋಜಿನೀದೇವಿ"ಯಿಂದ ಉಜ್ವಲವಾಗತಕ್ಕದ್ದಿತ್ತು. "ಸರೋಜಿನಿ"ಯ ಆಯುಷ್ಯದ ಧ್ಯೇಯವನ್ನು ನಾವು ಅದೆಷ್ಟು ಆಸ್ಥೆಯಿಂದ ನಿಶ್ಚಯಿಸುತ್ತಿದ್ದೆವು—ಆಕೆಯ ಶಿಕ್ಷಣಕ್ಕಾಗಿ ಅದೆಷ್ಟು ಯೋಜನೆಗಳನ್ನು ಮಾಡಿಟ್ಟಿದ್ದೆವು—ಆಕೆಯ ಆಟಪಾಟಗಳಲ್ಲಿ ಅದೆಷ್ಟು ಸಮರಸರಾಗುತ್ತಿದ್ದೆವು! "ಸರೋಜಿನಿ" "ಸರೋಜಾ"—ನಮಗೆ ತಲೆತುಂಬ ವಿಚಾರ, ಕೈ ತುಂಬ ಕೆಲಸ ಆಕೆಗಾಗಿ—ಮೃತ್ಯುದೇವತೆಗೊಂದು ದಿನ ಆಕೆಯಲ್ಲಿ ಪ್ರೀತಿ ಹುಟ್ಟಿತು. ನಮ್ಮ ಕೈ ಬರಿದಾಯಿತು.

ಒಂದು ಮಗುವಿನ ಸ್ಮಶಾನಯಾತ್ರೆಗೆ ಅಷ್ಟು ಜನ ಬಂದದ್ದು ಅಪೂರ್ವವಿತ್ತು. ಸ್ನೇಹಿತರೆಲ್ಲರೂ ಬಿಟ್ಟು ಬಿಡದೆ ಬಂದಿದ್ದರು. ನಮ್ಮ ಮೂರ್ತಿವಂತ ಆನಂದ ಈ ರೀತಿ ಮಣ್ಣುಪಾಲಾದದ್ದನ್ನು ಕಣ್ಣಾರೆ ಕಂಡೂ ನಂಬಲಾರದವರಾಗಿದ್ದೆವು. ಹಸ್ತಸಾಮುದ್ರಿಕೆಯಲ್ಲಿ ನನಗೆ ವಿಶ್ವಾಸ—ಆಕೆಯ ಆಯುಷ್ಯರೇಖೆಯನ್ನು ನೋಡಿದ್ದೆ—ಅದು ಬಲವತ್ತರವಿತ್ತು. ಆದರೂ ಈ ವಿಪರೀತ ಪ್ರಸಂಗ ಹೇಗೆ ಬಂದಿರಬಹುದೆಂಬು ದನ್ನರಿಯದಾಗಿ ಈಗ ಆ ರೇಖೆಯ ಕಡೆಗೆ ಶೂನ್ಯದೃಷ್ಟಿಯಿಂದ ನೋಡುತ್ತ ಕೂತಿದ್ದೆ.

“ ಅಲ್ಲೇನು ಬರದಿರತ್ತೈತ್ರಿ, ದಾಸ್ಯಾರ !–ಕತ್ತಲಕುಣ್ಯಾಗ ಕುಂತ ಮಾರಾಯಳು ಬರದದ್ದನ್ನೋದಿ ನಾನೇಟು ಪುರೋಸ್ತೇವ್ರಿ ? ” ಕಟ್ಟಿಗೆ ಗಳನ್ನು ಒಟ್ಟುತ್ತ ಒಬ್ಬ ಆಳುಮನುಷ್ಯನೆಂದ. ಅಹುದು ಆತನ ಮಾತೂ ಸರಿಯಾದದ್ದೆ !

‘ ಸರೋಜಾ ’ ನ ಋಣವನ್ನು ತೀರಿಸಿ ಚಿತೆಯ ಕಡೆಗೆ ನಿರ್ವಿಕಾರ ಮನಸ್ಸಿನಿಂದ ನೋಡುತ್ತ ಕೂತಿದ್ದೆವು. ಯಾವನೊ ಒಬ್ಬ ಅಯ್ಯ, ಹತ್ತರದ ಹಳ್ಳಿಗೆ ಹೊರಟಿದ್ದ –ಚಿತೆಯ ಹತ್ತರ ಎಷ್ಟೊ ಹೊತ್ತಿನವರೆಗೆ ನಿಂತಿದ್ದ. ಕೊನೆಗೆ ತನ್ನ ವಿಚಾರದ ತಾದ್ಮಯದಿಂದೆಚ್ಚತ್ತು ಮುಂದೆ ಸಾಗಿದ. ಹೋಗುವಾಗ “ ಇನ್ನೂ ಜೀವ ಇತ್ತರಿ. ನೀವು ಸುಳ್ಳೆ ಅವಸರ ಮಾಡಿದ್ರಿ” ಎಂದು ಹಳಹಳಿಸಿದ.

ನಾವು ಸ್ತಂಭಿತರಾದೆವು. ಅತ್ತಿತ್ತ ನೋಡಿದೆವು. ಅಯ್ಯ ಕಾಣ ಲಿಲ್ಲ. “ ಹೋಗಲ್ಯೊ—ಆ ಅಯ್ಯ ಎಲ್ಲಿದ್ದಾನ ಹುಡುಕ್ರಿ— ” ಎಂದು ಒಂದೇ ಗಲಭೆ ಎದ್ದಿತು. ಅಲ್ಲಿ ಇಲ್ಲಿ ಜನರು ಹೊರಟರು—

—ತಲೆ ಬುರುಡಿ ಒಡೆದ ಸಪ್ಪಳವಾಯಿತು.

ಜೀವ ತಿರುಗಿ ಬಂದರೂ ಬರಬಹುದೆಂದೆನ್ನೋಣ. ಆದರೆ ಅದನ್ನು ತಿರುಗಿ ಹೊಗಿಸಲಿಕ್ಕೆ ಮನೆ—ದೇಹವೆಲ್ಲಿತ್ತು ! “ ಸರೋಜಾ ”– ಆ ಕರ್ಪೂರದ ಗೊಂಬೆ ಕೈಗೆ ಹತ್ತದನ್ನು ಸುಟ್ಟು ಹೋಗಿತ್ತು.

# ಚಾಂದನ ಮಹಾಯಾತ್ರೆ

೧

ನಮ್ಮ ಮನೆಗೆ ಚೌಕಿಯಂತೂ ಇದ್ದಿಲ್ಲ. ಆದರೆ ಚಾಂದನಿಗೆ ಮಾತ್ರ ಎಲ್ಲರೂ 'ಚೌಕೀದಾರ ಸಾಹೇಬ' ಎಂದು ಕರೆಯುತ್ತಿದ್ದರು. ಆತನು ನಮ್ಮ ಮನೆಗೆ ಎಂದು ಬಂದನೋ ಏನೋ, ನನಗ ತಿವಳಿಕೆ ಬಂದಂದಿನಿಂದ ನೋಡುತ್ತಿದ್ದೆ. ಆತನು ಒಳ್ಳೆಯ ಹಣ್ಣಾದ ಮುದುಕನಾಗಿದ್ದ. ಆತನ ಕಪ್ಪು ಗಡ್ಡಮೀಸೆಗಳನ್ನು ತಂದೆಯವರೂ ನೋಡಿದ್ದಿಲ್ಲವಂತೆ. ಅವರು ಆತನಿಗೆ ಅರ್ಧ ಸಂಬಳ ಅಥವಾ ಪೆನ್‌ಶನ್ ಕೊಡುತ್ತಿದ್ದರೆಂದು ನನಗಾದರೂ ಇತ್ತೀಚೆಗೆ ಅಂದರೆ ನನ್ನ ಮೇಲೆ ಆ ಪೆನ್‌ಶನ್ ನಡೆಯಿಸುವ ಭಾರ ಬಿದ್ದಾಗ ಗೊತ್ತಷ್ಟೇ.

ಕೇವಲ ಮೂರು ರೂಪಾಯಿಗಳು. ಪ್ರತಿ ತಿಂಗಳು ಕೊಡಲೇಬೇಕು. ಮನೆಯಲ್ಲಿ ಇನ್ನೊಬ್ಬ ಆಳುಮನುಷ್ಯನಿದ್ದ. ಆತನ ಸಂಬಳ ಕೊಟ್ಟರೂ ಸೈ ಬಿಟ್ಟರೂ ಸೈ. ಚಾಂದನದು ಮಾರವಾಡದ ಹಿಡತ.

ಮೊದಲಿನಿಂದ ತಂದೆಯವರ ಕೈ ಸಡಿಲು. ಮನೆಯಲ್ಲಿಯ ಇತಮಾಮೂ ದೊಡ್ಡದು. ತಿಂಗಳಿಗೆ ಬರುವ ೭೦-೮೦ ರೂಪಾಯಿಗಳಲ್ಲಿ

ಎಲ್ಲ ಯಥೇಚ್ಛ ಸಾಗಬೇಕಾಗುತ್ತಿತ್ತು. ಒಮ್ಮೆ ಕಾಂತಾಪ್ರಸಾದರೆಂಬ ಬೀನಕಾರರು (ವೈಣಿಕರು) ತಮ್ಮ ಚಾತುರ್ಮಾಸ್ಯವನ್ನು ನಮ್ಮ ಮನೆಯಲ್ಲಿಯೇ ಕಳೆದರಂತೆ. ಆಗಲೂ ಚಾಂದಸ ಮೂರು ರೂಪಾಯಿಗಳ ಭಾರ ತಂದೆಯವರಿಗೇ ಮೀರಿದ್ದಾಗುತ್ತಿತ್ತೋ ಏನೋ, ಪ್ರತಿ ತಿಂಗಳು ಅದರ ಚರ್ಚೆಯಾಗದಿರುತ್ತಿದ್ದಿಲ್ಲ. ತಂದೆಯವರು ಏನೋ ಒಂದೊಂದು ಸಲ " ಸಾಹೇಬ ನಿನಗೆ ಮುಂದಿನ ತಿಂಗಳಿನದ್ದಾ " ಇಷ್ಟೆಂದರೆ ಸಾಕು, ಸಾಹೇಬರು 'ಗರಮ' ಆದರೇ. 'ಫ್ರೋ— ಮನ ಮುಟ್ಟೇರಿ ನಿಮ್ಮ ಮೂರು ರೂಪಾಯಿ—ಒಂದೊಂದು ಕಂಪೂರಿ ಯಾಕ್ತಿಪ್ಪತ್ತ ಮೂರಿ ಪ್ರತ್ತ ಹಾರಸಾಂವ ನಾ— ಎಲ್ಲಿ ಮುಟ್ಟೀಕು ನಿಮ್ಮ ಸಂಬಳ— ಇಷ್ಟ ಮಾಸ್ಕಾಲ್ಲಿ ಮ್ಮ ನೋಕರಿs ಆರs ಯಾವ ಮಾಹಾರಾಂತs-' ಎಂದು ಹೋಗೇ ಬಿಡುತ್ತಿದ್ದರು. ಎರಡು ಮೂರು ದಿನ ಅವರ ಸುಳಿವೇ ಇರುತ್ತಿದ್ದಿಲ್ಲ. ಆ ಮೇಲೊಂದು ದಿನ ನಸುಕು ಹರಿಯುವುದರೊಳಗಾಗಿ ಸಾಹೇಬರು ಮನೆಯ ಕಟ್ಟೆಯ ಮೇಲೆ ಕಾಣುತ್ತಿದ್ದರು. ಆ ದಿನ ನಮ್ಮ ಆಳು ಮಗನಿಗೆ ಕೆಲಸದ ಚಿಂತೆಯೇ ಇರುತ್ತಿದ್ದಿಲ್ಲ.

ಸಾಹೇಬರಿಗೆ ಪೆನ್‌ಶನ್ ಸರಿಯಾಗಿ ಸಿಗಬೇಕೆಂದು ನಾನೂ ದೇವರಿಗೆ ಬೇಡಿಕೊಳ್ಳುತ್ತಿದ್ದೆ. ಅದರಲ್ಲಿ ನನ್ನದೊಂದು ಸ್ವಾರ್ಥವಿತ್ತು. ಪೆನ್‌ಶನ್ ಸಿಕ್ಕ ಕೂಡಲೊಮ್ಮೆ ನನ್ನ ಆಟಿಗೆಯ ಸಾಮಾನುಗಳದೊಂದು ಸುಗ್ಗಿ ಬರುತ್ತಿತ್ತು. 'ರಾಯ'ರ ಕಡೆಗೆ ರೂಪಾಯಿ ಇದ್ದದ್ದು ಬಿಟ್ಟಿದ್ದು ನನಗೆ ಪೂರಾ ಗೊತ್ತು. ಸಾಹೇಬರಿಗೆ ಸುದ್ದಿ ಹೇಳುವವ ನಾನು. ನನ್ನ ಬರಗಾಲದ ನೋವು ನನಗೆ. ಒಂದು ದಿನ ಈ ಸುಗ್ಗಿಗೆ ಪೂರಾ ಬರಗಾಲ ಬಂದು ಬಿಟ್ಟಿತು.

ಚಾಂದ ನನಗಾಗಿ ಒಂದು 'ಗೋರಾ ಸಾಹೇಬರ ಟೊಪ್ಪಿಗೆ' ಕೊಂಡಿದ್ದ. ನಾನೂ ನನ್ನ 'ಹಂಟಿಗ್ ಸೂಟ್' ತೊಟ್ಟು ಆ ಟೊಪ್ಪಿಗೆಯನ್ನು ತಲೆಯ ಮೇಲಿಟ್ಟುಕೊಂಡು ನಿಂತುಕೊಂಡಿದ್ದೆ. ಆ ಕ್ಷಣಕ್ಕೆ ನಾನಂತೂ ಸಂಪೂರ್ಣ 'ಗೋರಾ ಸಾಹೇಬ'ನಾಗಿದ್ದೆ ಎಂಬುದರ ಬಗ್ಗೆ ನನಗಂತೂ ಸಂಶಯವಿದ್ದಿಲ್ಲ. ಯಸ್ ಫೆಸ್ ಏನು ಮಾತಾಡಲಿಕ್ಕೆ

ಬಂದೀತು. ತಂದೆಯವರು ಕಚೇರಿಯಿಂದ ಬಂದ ಕೂಡಲೆ ನಾನವರ ದೃಷ್ಟಿಗೆ ಬಿದ್ದೆ. ಕಚೇರಿಯ ಸಾಹೇಬನಿಗೆ ಮಾಡಿದಂತೆ ಈ ಸಾಹೇಬನಿಗಾದರೂ 'ಗುಡ್ ಮಾರ್ನಿಂಗ' ಮಾಡಬಹುದೆಂದು ನನಗೆ ಬಲು ಆಶೆ. ಅದೇನಿಲ್ಲ, ಅವರು ನನ್ನನ್ನು ಆಶ್ಚರ್ಯ ಸಿಟ್ಟು ಇವುಗಳಿಂದ ಕೂಡಿದ ಏನೋ ಒಂದು ನೋಟದಿಂದ ನೋಡಿ'ಟೊಪಿಗೆ ಯಾರದ ತಂದಿ!'ಎಂದು ಕೇಳಿದರು. ನಾನು ಅಭಿಮಾನದಿಂದ ಚಾಂದನ ಕಡೆಗೆ ನೋಡಿದೆ. ಆತನು ಕೆಳಗೆ ನೋಡಿ ಕಾಲಿನ ಹೆಬ್ಬೆರಳಿನಿಂದ ಏನೇನೋ ತೀಡುತ್ತಿದ್ದ. ಆತನ ಮಾಸ್ತರರು ಆ ದಿನ ಹಾಕಿಕೊಟ್ಟ ಪಾಠವಿರಬಹುದು. ಅಷ್ಟರಲ್ಲಿ ಎಲ್ಲಿಂದಲೋ ಬಂದು ಹಿಡಿ ರೂಪಾಯಿಗಳು ಸೂರೆಯಾದವು.''ನನಗಿನ್ನೂ ಬಹತನ ಬಂದಿಲ್ಲಪ್ಪಾ–'' ತಂದೆಯವರು ಮತ್ತೂ ಏನೇನೋ ಅಂದರು. ನನ್ನ ಟೊಪ್ಪಿಗೆಗೆ ಇಷ್ಟೇ ರೂಪಾಯಿಗಳು ಬಿದ್ದಿರಬಹುದು. ಚಾಂದನು ಅವುಗಳನ್ನು ಆರಿಸಿಕೊಂಡ. ಆ ರೂಪಾಯಿಗಳು ಯಾಕೆ ಸೂರೆಯಾದವೋ. ಅಂದಿನಿಂದ ನನ್ನ ಆಟಿಗೆಗಳ ನೆಲೆ ಮಾತ್ರ ಬತ್ತಿಹೋಯಿತು. ಚಾಂದನು ಪೆನ್‌ಶನ್‌ದ ವಿಷಯದಲ್ಲಿ ತನ್ನ ಮೊದಲಿನ ಹಿಡಿತವನ್ನೇನು ಬಿಟ್ಟಿದ್ದಿಲ್ಲ. ಆತನು ಈಗ್ಲೂ ಆಟಿಗೆಗಳನ್ನು ಕೊಳ್ಳುತ್ತಿದ್ದ, ಅವುಗಳನ್ನು ಮತ್ಯಾವದೋ ಹುಡುಗನಿಗೆ ಕೊಡುತ್ತಿರಬೇಕೆಂಬ ಸಂಶಯ ನನ್ನ ಮನಸ್ಸಿನಲ್ಲಿ ಬಂದು ಬಂದು ಹೋಗುತ್ತಿತ್ತು. ಆ ಹುಡುಗನು ಯಾರು ! ನಾನು ಅನೇಕ ಅಡ್ಡತಿಡ್ಡ ಪ್ರಶ್ನೆಗಳನ್ನು ಕೇಳಿ ಆತನ ಬಾಯಿಂದಲೇ ಆ ಹುಡುಗನ ಸುದ್ದಿ ಹೊರಡಿಸಬೇಕೆಂದು ಯತ್ನಿಸಿದೆ. ನನಗಂತೂ ಆ ಮಾತು ಶಕ್ಯವಾಗಲಿಲ್ಲ. ಮುಂದೆ ನನಗೇ ಆ ಮಾತಿನ ಹಳವಂಡ ಉಳಿಯಲಿಲ್ಲ. ನಾನು ಮರೆತುಬಿಟ್ಟೆ.

ಓಣಿಯಲ್ಲಿಯ ಯಾವ ಹುಡುಗನೂ ನನ್ನ ಸಂಗಡಿಗನಾಗಿದ್ದಿಲ್ಲ. ತಂದೆಯವರಿಗೇ ಆ ಮಾತು ಸರಿ ಬರುತ್ತಿದ್ದಿಲ್ಲ. ಹುಡುಗರು ಮನದಣಿಯೆ ಗೋಲಿ, ಚಂಡು, ಚಿಣಿಪಣಿ ಆಡುವದನ್ನು ದೂರದಿಂದ ನೋಡುವದೇ ನನಗೆ ಬಿಟ್ಟುಕೊಟ್ಟ ಆನಂದ. ಆದರೆ ಚಾಂದನ ಕೂಡ ಮಾತಾಡಲಿಕ್ಕೆ– ಆತನ ಬಾಯಿಂದ ರಾಜಪುತ್ರರ ಕಥೆಗಳನ್ನು ಕೇಳಲಿಕ್ಕೆ ಅವರು ಯಾರೂ ಇರುತ್ತಿದ್ದಿಲ್ಲ !

ಆ ಎಲ್ಲ ರಾಜಪುತ್ರರಲ್ಲಿ ಚಾಂದನು ಒಬ್ಬನಾಗಿ ಇದ್ದೇ ಇರುತ್ತಿದ್ದ. ಆತನು ಒಬ್ಬನೇ ಅಡವಿಯಲ್ಲಿ ಅದ್ದಾಡುತ್ತಿದ್ದ, ಆತನಿಗೆ ಹಾದಿಯಲ್ಲಿ ಎಷ್ಟೋ ರಾಕ್ಷಸರು ಭೆಟ್ಟಿಯಾಗುತ್ತಿದ್ದರು, ಅವರ ಕೈಯಿಂದ ಎಷ್ಟೋ ರಾಜಕನ್ನೆಯರನ್ನು ಬಿಡಿಸಿ ಮದುವೆಯಾಗುತ್ತಿದ್ದ, ಗಾಳಿಯ ಪಟದ ಮೇಲೆ ಕುಳಿತುಕೊಂಡು ಬೇಕಾದ ಊರಿಗೆ ಹೋಗುತ್ತಿದ್ದ,—ಇನ್ನೂ ಎಷ್ಟೆಂತ ಹೇಳಲಿ! ಆತನ ಹೇಳುವದೆಲ್ಲವೂ ಸುಳ್ಳಿರಬಹುದೆಂದು ನನ್ನ ಮನಸ್ಸಿನ ಪೂರಾ ಗ್ರಹಿಕೆಯಾಗಿತ್ತು. ಆದರೂ ಒಮ್ಮೆ ಚಾಂದನಾಗಿ ನೋಡಬೇಕೆಂತಲೂ ಅನಿಸುತ್ತಿತ್ತು. ಒಮ್ಮೊಮ್ಮೆ ಆತನು ನನ್ನನ್ನೂ ತನ್ನ ಸಂಗಡ ಎಲ್ಲೋ ಕರಕೊಂಡು ಹೋಗಿ, ಬೆಳಗಾಗುವಷ್ಟರಲ್ಲಿ ನನ್ನನ್ನು ನನ್ನ ಹಾಸಿಗೆಯ ಮೇಲೇ ತಂದು ಬಿಟ್ಟಿರುತ್ತಿದ್ದ.

ಒಮ್ಮೆ ನಮ್ಮ ಅಕ್ಕನ ಮದುವೆಯ ಸುದ್ದಿ ನಡೆದಿತ್ತು. ಆ ಮದುವೆಗೆ ನಾನೂ ಹೋಗಿದ್ದೆ. ಆದರೆ ಮೆರವಣಿಗೆಯ ಕಾಲಕ್ಕೆ ಆನೆ, ಒಂಟೆ, ಹುಲಿ, ಸಿಂಹ ಬಂದಿದ್ದವೆಂದು ಚಾಂದನ ಬಾಯಿಂದ ತಿಳಿದು ಬಂತು. ಮರಳಿ ನನ್ನ ಮುಂಜಿಗೂ ಆನೆ, ಒಂಟೆ ತರಿಸಲಿಕ್ಕೆ ನಾನು ತಂದೆಯವರಿಗೆ ಹೇಳಿಬಿಟ್ಟೆ. ಅವರೂ ನಕ್ಕು ಹಾಗೆ ಮಾಡೋಣವೆಂದರು.

ನನ್ನ ಮುಂಜಿಗೆ ನಾವು ಕೊಲ್ಹಾಪುರಕ್ಕೆ ಹೋಗಿದ್ದೆವು. ಗಾಡಿಯಿಂದಿಳಿದು ಊರೊಳಗೆ ಹೋಗುವಾಗ ಯಾರೋ ಇಬ್ಬರು ಎರಡು ಚಿಚರ್ುಗಳನ್ನು ನಾಯಿಯಂತೆ ಕಟ್ಟಿಕೊಂಡು ನಡೆದಿದ್ದರು. ಅವುಗಳನ್ನು ತೋರಿಸಿ ತಂದೆಯವರು ' ನೋಡು. ನಿನ್ನ ಮುಂಜಿಗೆ ಇವನ್ನ ತರಸ್ತೇವಿ ' ಎಂದು ನನಗೆ ಹೇಳಿದರು. ನಾನೂ ನನ್ನ ಮುಂಜಿಗೆ ಚಿಚರ್ುಗಳು ಬಂದೇ ಬರುವವೆಂದು ಗಟ್ಟಿಮಾಡಿಕೊಂಡಿಟ್ಟೆ. ಮುಂಜಿಯ ದಿನ ರಾತ್ರಿ ೧೦ ಗಂಟೆಯ ವರೆಗೆ ದಾರಿ ಕಾಯುತ್ತ ಕುಳಿತಿದ್ದೆ. ಆನೆ ಬರಲಿಲ್ಲ. ಒಂಟೆ ಬರಲಿಲ್ಲ. ನಾನು ನೋಡಿದ ಚಿಚರ್ುಗಳೂ ಬರಲಿಲ್ಲ. ಮರುದಿನ ಕೇಳಿದೆ. ಅವು ಬಂದಾಗ ನಾನು ಮಲಗಿಕೊಂಡಿದ್ದೆನೆಂದು ಹೇಳಿದರು. ಆಯಿತು. ಆ ದಿನ ಸೂರ್ಯನಿಗೆ ನನ್ನ ಕಣ್ಣೀರಿನ ಅರ್ಘ್ಯ ಸಿಕ್ಕಿತು.

ಆ ಮೇಲೆ ಊರು ನೋಡಲಿಕ್ಕೆಂದು ಹೋದಾಗ ಒಂದು ತೋಟದೊಳಗೆ ಈ ಎಲ್ಲ ಪ್ರಾಣಿಗಳನ್ನು ಕಂಡೆ. ಸಾಡೆ ಮುಗಿಸಿಕೊಂಡು ಗುಡಿಗೆ ಹೋಗುವಾಗಲೇ ಇವುಗಳನ್ನು ತಂದಿದ್ದರೆ ನೆಟ್ಟಗಾಗುತ್ತಿತ್ತೆಂಬ ಕಲ್ಪನೆ ನನ್ನ ಮನಸ್ಸಿನಲ್ಲಿ ಬಾರದಿರಲಿಲ್ಲ.

ಕೊಲ್ಹಾಪುರದಿಂದ ನಮ್ಮೂರಿಗೆ ಮರಳಿ ಬಂದೆವು. ತುಸು ದಿನಗಳಲ್ಲಿ ತಂದೆಯವರು ತೀರಿಕೊಂಡರು. ಎಲ್ಲರೂ ಅತ್ತರು. ನಾನೂ ಅತ್ತೆ. ಚಾಂದ ಎಷ್ಟೋ ದಿನ ಊಟ ಉಡಿಗೆ ಇಲ್ಲದೇ ಮಲಕೊಂಡಿದ್ದ. ನಮ್ಮ ಮನೆಯಲ್ಲಿ ಎಷ್ಟೋ ಜನರು ಒಂದು ಊಟ ಮಾಡಿ ಹೋಗುತ್ತಿದ್ದರು. ಒಂದು ದಿನ ಚಾಂದ ನನ್ನನ್ನು ಮೋಹರಮದ ದೇವರನ್ನು ಕೂಡಿಸುವ ಮನೆಗೆ ಕರಕೊಂಡು ಹೋಗಿದ್ದ. ಅಲ್ಲಿ ದೇವರನ್ನು ಕೂಡಿಸಿದ್ದಲ್ಲಿ ಎಷ್ಟೋ ಜನ ಫಕೀರರು ಊಟ ಮಾಡುತ್ತಿದ್ದರು. ನನ್ನನ್ನು ಒಂದು ಕಟ್ಟೆಯ ಮೇಲೆ ಕೂಡಿಸಿ ಏನೇನೋ ಹಾಡಿ ಮಂತ್ರ ಹಾಕಿ ನನ್ನ ಕೊರಳಲ್ಲಿ ಒಂದು ಕರಿಯ ದಾರವನ್ನು ಕಟ್ಟಿ ನನ್ನ ಕೈಯಲ್ಲಿ ಸಕ್ಕರೆಯ ಪುಡಕಿ ಕೊಟ್ಟರು. ಮನೆಗೆ ಬರುವಾಗ ಚಾಂದ ನನ್ನನ್ನು ನೆಲದ ಮೇಲೆ ನಡೆಯಗೊಡಲಿಲ್ಲ. ಆತನ ಹೆಗಲ ಮೇಲೆ ಕುಳಿತುಕೊಂಡು ಹೀಗೆ ಹೋಗುವದು ನನ್ನ ಮನಸ್ಸಿನಲ್ಲಿದ್ದಿಲ್ಲ. ಆದರೂ ಸುಮ್ಮನಿದ್ದೆ.

೨

ನಾನು ಇಂಗ್ರೇಜಿ ಶಾಲೆಗೆ ಹೋಗಹತ್ತಿದೆ. ಶಾಲೆಗೆ ಕರಕೊಂಡು ಹೋಗುವದೂ ಅಲ್ಲಿಂದ ಮನೆಗೆ ಕರಕೊಂಡು ಬರುವದೂ ಚಾಂದನಿಗೇ ಒಪ್ಪಿತ್ತು. ಒಂದೊಂದು ದಿನ ನನಗೆ ಶಾಲೆಗೆ ಹೋಗುವದಕ್ಕೆ ಬೇಸರ ಬಂದಾಗ ನನ್ನನ್ನು ತನ್ನ ಗುರುತಿನ ಯಾವದೋ ಮನೆಗೆ ಕರಕೊಂಡು ಹೋಗಿ ಶಾಲೆ ಬಿಡುವಾಗ ಮನೆಗೆ ತಂದು ಮುಟ್ಟಿಸುತ್ತಿದ್ದ.

ನನಗೀಗ ೧೬ನೆಯ ವರ್ಷ ನಡೆದಿತ್ತು. ಶಿಕ್ಷಣವೂ ಯಥಾತಥಾ ಸಾಗಿತ್ತು. ಮನೆಯಲ್ಲಿ ನನ್ನ ಲಗ್ನದ ಮಾತೂ ನಡೆಯಲಾರಂಭಿಸಿತ್ತು. ಚಾಂದನ [illegible] ವರ್ಷದ ಹಿಂದೆ 'ಸೂತೋವಾಚ' ಮಾಡಿಬಿಟ್ಟಿದ್ದ.

ಒಂದು ರಾತ್ರಿ ಊಟ ಮಾಡಿ ಹಾಸಿಗೆಯ ಮೇಲೆ ಬಿದ್ಕೊಂಡಿದ್ದೆ. ನಮ್ಮ ತಾಯಿ ಹತ್ತಿರ ಕುಳಿತುಕೊಂಡಿದ್ದಳು. ಚಾಂದನೂ ಇದ್ದ. ಏನೋ ಸುಖದುಃಖದ ಮಾತುಕಥೆ ನಡೆದಿದ್ದವು. ಚಾಂದನೇ ನಡುವೆ ಮಾತು ತೆಗೆದ. 'ಬಾಯರs, ನಂಣರಾಯರ ಲಗ್ನsನೂ ಹೊಡಿಸಿ ಬಿಡ್ರಿ ಈ ವರ್ಸ, ತುಳಶೀ ಮದಿವ್ಯಾದ ವ್ಯಾಗ' ನನಗೆ ಯಾವಾಗಲೋ ನಿದ್ದೆ ಹತ್ತಿ ಬಿಟ್ಟಿತ್ತು!– ನಾನು ಉತ್ಸುಕತೆಯಿಂದ ಮುಂದ ಕೇಳತೊಡಗಿದೆ.

' ಇನ್ನೂ ನಂಣsವಪ್ಪಾ ' ಅವ್ವ ಅಂದಳು.

' ನಂಪರs ಏನ್ಕೃತಿ ! ಆಗಾಟಾತು ಬೋಗಾಟಾತು ಲಗಾಟsೀ ಉಳದsತಿ. ದೊಡ್ಡರಾಯುರsಟು ತಮ್ಮ ಮಗನ ಹೊಟ್ಟೀಲಿ ಹುಟ್ಟಿದ್ನೋಡಿದ್ನೆsಂದ್ರು....' ಕುತ್ತಿಗೆ·ಬಿಗಿದು ಬಂದದ್ದರಿಂದ ಸುಮ್ಮನಾದ. ಅವ್ವನೂ ಕಣ್ಣೊರಿಸುತ್ತ ಕುಳಿತುಕೊಂಡದ್ದು ಅಲ್ಲಿಯೇ ಹೀಗೆ ಕಣ್ಣು ತೆರೆದು ನೋಡಿದೆ. ಮುಂದೆ ನನಗೆ ನಿಜವಾಗಿಯೂ ನಿದ್ರೆ ಹತ್ತಿರಬೇಕು.

ಮರುದಿನದಿಂದ ಚಾಂದ ಕನ್ಯಾ ನೋಡಲಿಕ್ಕೇ ಪ್ರಾರಂಭ ಮಾಡಿದ. ೧೧-೧೨ ವರ್ಷದ ಹೆಣ್ಣು ಹುಡಿಗೆಯರು ಮನೆಗೆ ಬರುವದೇ ಕಳವು; 'ಕೇಳಾಡಿ ನೋಡಿ' ಎಂದು ಚಾಂದ ಸೂಚಿಸಿದನೇ. ಒಮ್ಮೆ ನಮ್ಮ ಕಕ್ಕನ ಮಗಳು ಚಂದ್ರಿ ದೀವಳಿಗೆಗೆಂದು ಬಂದವಳು ೨-೩ ತಿಂಗಳು ನಮ್ಮಲ್ಲಿಯೇ ಇದ್ದಳು. ಇಬ್ಬರದೂ ಆಡುವ ವಯಸ್ಸು. ನನ್ನ ಕೂಡ ನಡೆದ ಅವಳ ನಗೆಚೇಷ್ಟೇ ಒಟ್ಟಿನಮೇಲೆ ಅವಳ ಸ್ವಭಾವ ನೋಡಿ ಅವಳು ಪೂರಾ ಚಾಂದನ ಒರೆಗೆ ಬಂದಳು. ಒಂದು ದಿನ ಅವ್ವನಿಗೆ ಕೇಳಿದ 'ಈ ಚಂದ್ರುಕ್ಕನ್ನ ಯಾಕ ನಾವು ತಗೋಬಾರದು. ಆಕ್ಕsತಿ ಮನ್ಯಾಗಿಂದ ಮನ್ಯಾಗs.' ಅವ್ವನಿಗೆ ಆತನ ಮಾತಿನ ಸಂದರ್ಭ ತಿಳಿಯಿತು. ಅವಳು ಮುಗುಳ್ನಗೆ ನಗುತ್ತ–'ಹಾಂಗ ಅನಬಾರದ ಚಾಂದಾ, ನಮ್ಮಲ್ಲೆ ಮಾಡಿಕೊಳ್ಳಿಕ್ಕೆ ಬರೂದಿಲ್ಲs– ಅಂಣಾ ತಂಗಿ ಆಗತಾರಪ್ಪಾ.'

ಚಂದ್ರಿಯ ಸ್ವಭಾವ ನನ್ನ ಮನಸ್ಸಿಗೂ ಬಂದಿತ್ತು. ಆದರೂ ಮದುವೆಯ ಮಾತು ತೆಗೆದರೆ ನನಗಿನ್ನೂ ನಾಚಿಕೆ ಬರುತ್ತಿತ್ತು. ಅವ್ವ

ಹೇಳಿದಂತೆ ನಾವು ಅಂಣಾ ತಂಗಿ ಆಗುತ್ತಿದ್ದೆವೋ ಇಲ್ಲವೋ ನನಗೆ ತಿಳಿಯುತ್ತಿದ್ದಿಲ್ಲ. ಆದರೂ ಚಂದ್ರಿಯು ಕೂಡ ಮದುವೆಯಾದರೆ ನಾಚಿಕೆಯಿಂದ ನನಗೆ ಅವಳ ಕೂಡ ಆಡುವದಕ್ಕೇ ಧೈರ್ಯವಾಗಲಿಕ್ಕಿಲ್ಲವೆಂದೆನಿಸಿತು. ಚಾಂದನ ಮಾತು ಕೇಳಿ ನನಗೆ ಸಿಟ್ಟು ಬಂತು. ನನ್ನ ಮದುವೆಯ ಚಿಂತೆ ಈತನಿಗೇಕೆ !

ಇತ್ತೀಚೆಗೆ ಏನು ಕೆಲಸ ಹೇಳಿದರೂ ಹದಿನೆಂಟು ಪಂಟು ಹೇಳಿ ತಪ್ಪಿಸಿಕೊಳ್ಳುತಿದ್ದ ಚಾಂದ. ಒಮ್ಮೆ ಆತನ ಕೈಯಲ್ಲಿ ನಾನೊಂದು ಪತ್ರ ಪೋಸ್ಟ ಮಾಡಲಿಕ್ಕೆ ಕೊಟ್ಟಿದ್ದೆ. ನಾನು ಪತ್ರ ಕೊಟ್ಟಿದ್ದು ಮುಂಜಾನೆ ಆತನು ತಿರುಗಿ ಮನೆಗೆ ಬಂದಾಗ ಹೊತ್ತು ಮುಳುಗಿ ಹೋಗಿತ್ತು. ನನಗೂ ನನ್ನ ಸಿಟ್ಟು ತೀರಿಸಿಕೊಳ್ಳಲಿಕ್ಕೆ ಇಂಥದೇನಾದರೂ ನೆವ ಬೇಕೇ ಆಗಿತ್ತು. ಸಾಹೇಬ ಕಣ್ಣಿಗೆ ಬಿದ್ದ ಕೂಡಲೇ, ನಾನು 'ಏನಪ್ಪಾ, ನಾವು ಕೆಲಸಾ ಹೇಳೋದs ತಪ್ಪs ! ಪತ್ರ ಏನು ನೀನs ಊರಿಗೆ ಹೋಗಿ ಮುಟ್ಟಿಸಿ ಬಂದೆಯೋ ಏನು ಮತ್ತs !' ಚಾಂದನ ಮೋರೆಯ ಮೇಲೆ ಯಾವ ಪ್ರಕಾರದ ಬದಲೂ ಕಂಡು ಬರಲಿಲ್ಲ. ಆತನು ತನ್ನ ಇತಿಹಾಸದ ಗಂಟು ಬಿಚ್ಚಿದ. 'ಏನ ಹೇಳ್ಲಿ ಅದರ ಬವಣಿsನs. ಶಿಪಾಯಿ ಪತ್ರದ ಚೀಲಾ ಕಟಗೊಂಡ ಹೋಗಿ ಬಿಟ್ಟಿದ್ದ. ಟೇಸನ್‌ಕೋಡಿದ್ನಿ. ಗಾಡಿ ಹೊಂಟು ನಿಂತಿತ್ತು. ಗಾಡಿ ಸಾಬಗ ತಮ್ಮ ಸಲಾಮು ಹೇಳಿ, ಇದ ನಮ್ಮ ರಾಯರ ಪತ್ರs ಇಲಾಯತಿಗೆ ಹೋಗೋದೈತಿ ಅಂತ ಹೇಳಿದೆ. ಗಾಡಿ ಆರಬಡಿಸಿ ನಿಂದಿರಿಶಿ ಪತ್ರ ತೊಗೊಂಡs–'

ಅಲ್ಲಿಯ ೧೦–೨೦ ಮೈಲು ದೂರ ಇದ್ದ ಊರಿಗೆ ಬರೆದ ಪತ್ರ ವಿಲಾಯತಿಗೆ ಕಳಿಸಿದ್ದಕ್ಕಾಗಿ ಸಿಟ್ಟಾಗಬೇಕೋ ನಗಬೇಕೋ ನನಗೇ ತಿಳಿಯದಂತಾಯಿತು. ನಾನು ಮತ್ತೇನಾದರೂ ಕೇಳುವಷ್ಟರೊಳಗಾಗಿ ಚಾಂದ 'ಗಾಡಿಸಾಬ ನಿಮಗ ಸಲಾಮು ಹೇಳ್ಯಾನs' ಎಂದು ಹೇಳಿ ಹೋಗೇ ಬಿಟ್ಟ. ನಾನು ಬೆಪ್ಪನಾಗಿ ನೋಡುತ್ತ ನಿಂತೆ.

ನನ್ನ ಮದುವೆ ಗೊತ್ತಾಯಿತು. ಚಾಂದನ ಉತ್ಸಾಹವನ್ನೇನು ಹೇಳಲಿ ! ದಿನಕ್ಕೆ ಹತ್ತು ಸಾರೆ 'ಸಂಣಬಾಯರನ್ನು ನೋಡಿ ಬರುತ್ತಿದ್ದ.

ನಮ್ಮ ಬೀಗರೂ ದೊಡ್ಡ ಮನೆತನದವರು. ಚಾಂದ ನಮ್ಮ ಮನೆಯ ಸಂದಿಗೊಂದಿಯನ್ನೆಲ್ಲ ಅರಿತನ. ಅವರು ಆತನನ್ನು ನಮ್ಮ ಮನೆತನದ ಬಗ್ಗೆ ಏನಾದರೂ ಕೇಳಿದಾಗ ನಾವು ಹಿಂದುಸ್ಥಾನದಲ್ಲಿಯ ಯಾವ ಸಂಸ್ಥಾನಿಕರಿಗೂ ಕಡಿಮೆಯಿಲ್ಲವೆಂಬ ಕಲ್ಪನೆ ಅವರ ಮನಸ್ಸಿನ ಮೇಲೆ ಬಿಂಬಿಸಿಯೇ ಬಿಡುತ್ತಿದ್ದ.

ನಮ್ಮ ಮಾವಂದಿರು ಅದೇ ಊರಲ್ಲಿ ಸರಕಾರಿ ವಕೀಲರಿದ್ದರು. ಚಾಂದನ ಕೋಶದಲ್ಲಿ ಅದಕ್ಕೆ 'ಜಡ್ಜಿ ಕೆಲಸ'ವೆಂಬ ಶಬ್ದವಿತ್ತು. ನಮ್ಮ 'ಪಟ್ಟರಾಣಿ'ಯಂತೂ ಕೇವಲ ನೂರಜಾನ್ ಅಥವಾ-ಗೋಕಾಂವಿ ಗೊಂಬೆ. ಬೇರೆ ಮಾತಿಲ್ಲ.

ಮದುವೆಯಾಯಿತು. ಚಾಂದನ ಕೈಯಲ್ಲಿ ಕೊಟ್ಟ ಅಕ್ಕಿಯಕಾಳು ನಮ್ಮ ತನಕ ಬಂದು ಮುಟ್ಟಿದವು.

೩

ಚಾಂದ ಈಗ ಒಳ್ಳೆಯ ಹಣ್ಣಾಗಿ ಹೋಗಿದ್ದ. ನಮ್ಮ ಮನೆ ಯನ್ನೂ ಬಿಟ್ಟು, ಯಾವಳೋ ಮೊಮ್ಮಗಳಿದ್ದಳಂತೆ, ಅವಳ ಮನೆಯಲ್ಲಿಯೇ ಇರಹತ್ತಿದ್ದ. ತಿಂಗಳಿಗೊಮ್ಮೆ ಪೆನಶನ್ ಒಯ್ಯಲಿಕ್ಕೆಂದು ಬರುತ್ತಿದ್ದ ನಷ್ಟೇ.

ಆ ದಿನ ನಮ್ಮಲ್ಲಿ ಸೀಮಾಂತವಿತ್ತೋ ಏನೋ. ಚಾಂದ ನನಗಾಗಿ ಒಂದು ಜರತಾರಿ ರುಮಾಲ, 'ಆಕೆ'ಗೆ ಒಂದು ಖಣ ಉಡುಗರೆಯಾಗಿ ತಂದಿದ್ದ-ಊಟ ನಮ್ಮಲ್ಲಿಯೇ ಮಾಡಿದ. ಸಂಜೆಗೆ ಆರುತಿಯಾದಾಗ ಆತನ ಕಣ್ಣುಗಳಿಂದ ಆನಂದಾಶ್ರುಗಳುದುರಿರಬೇಕು. ಎಲ್ಲ ಹಿರಿಯರಿಗೆ ನಮಸ್ಕಾರ ಮಾಡಿದಂತೆ ನಾವು ಆತನಿಗೆ ನಮಸ್ಕಾರ ಮಾಡಿದೆವು. ಯಾಕೋ ಏನೋ ಆತನನ್ನು ನೋಡಿದ ಕೂಡಲೆ ನನ್ನ ಮನಸ್ಸಿನಲ್ಲಿ ಆತನ ಬಗ್ಗೆ ಒಂದು ಪ್ರಕಾರದ ಆದರವೇ ಹುಟ್ಟಿತು.

ಮರುದಿನ 'ಆಕೆ' ತವರು ಮನೆಗೆ ಹೋದಳು. ಚಾಂದ ಕಳಿಸಲಿಕ್ಕೆ ಬಂದಿದ್ದ. "ಬಾಯರ‍್ರ, ಬರುವಾಗ ರಾಯರನ ಕರಕೊಂಡ ಬರ‍್ರಿ ಸುತ್ತ್ರ ಆಡನಾಕ ನಾ ಅದೇನಿರಂದೆ' ಎಂದು ಹೇಳಿದ.

೪

'ಆಕೆ'ಗೆ ಅಷ್ಟೇ ಹದಿನಾಲ್ಕು ವಯಸ್ಸು. ಇದೇ ಮೊದಲಸಲ. ಎರಡು ದಿನಗಳಾದರೂ ಬಿಡುಗಡೆಯಾಗದ್ದರಿಂದ ಸಿವಿಲ್ ಸರ್ಜನ್ ಸಾಹೇಬರು ಹಾಸ್ಪಿಟಲಿಗೇ ಕರಕೊಂಡು ಹೋಗಿದ್ದರು. ಮೂರನೆಯ ದಿನ ಮಧ್ಯಾಹ್ನದ ೧೨ ಗಂಟೆಗೆ ಸಾಹೇಬರು ತಮ್ಮ ನಿರ್ಣಯಕೊಟ್ಟರು- ನಾವೆಲ್ಲರೂ ಹೊರಗೆ ಬಾಯಲ್ಲಿ ಅಕ್ಕಿಯಕಾಳು ಹಾಕಿಕೊಂಡು ನಿಂತಿದ್ದೆವು,-'ಇನ್ನೊಂದು ಗಂಟೆಯೊಳಗಾಗಿ, ಬಿಡುಗಡೆಯಾಗದಿದ್ದರೆ ಶಸ್ತ್ರ ನಡೆಯಿಸಬೇಕಾಗಬಹುದು.' ನಮ್ಮೆಲ್ಲರಿಗೂ ಊಟ ಮುಗಿಸಿಕೊಂಡು ಬರಹೇಳಿದರು. ಒಬ್ಬೊಬ್ಬರೇ ಊಟ ಮುಗಿಸಿಕೊಂಡು ಬಂದರು. ಅವ್ವನೂ ಬಂದಳು. ಈಗ ನಾನು ಹೊರಟೆ.

ಮನೆಯೊಳಗೆ ಚಾಂದ ದಾರಿ ಕಾಯುತ್ತ ನಿಂತಿದ್ದ. ಸುದ್ದಿ ಕೇಳುವದಕ್ಕಾಗಿ ಆತನ ಮನಸ್ಸು ಹಾತೊರೆಯುತ್ತಿತ್ತು. ನನ್ನ ಲಕ್ಷಣ ನೋಡಿ ಏನೂ ಮಾತಾಡದೇ ಸುಮ್ಮನಾದ. ನಾನು ಹಾಗೂ ಹೀಗೂ ಮಾಡಿ ಊಟವನ್ನಂತೂ ಮುಗಿಸಿದೆ. ಹೊರಗೆ ಟಾಂಗಾ ಇದ್ದೇ ಇತ್ತು. ಹಾಸ್ಪಿಟಲ್ಲಿಗೆ ಹೊರಟೇ ಬಿಟ್ಟೆ. ಚಾಂದ ಮುಂಚಿತವಾಗಿಯೇ ಗಾಡಿಯಲ್ಲಿ ಕುಳಿತುಕೊಂಡಿದ್ದ. ನಾನು ಏನೂ ಮಾತಾಡಲಿಲ್ಲ.

ಹಾಸ್ಪಿಟಲ್ಲಿಗೆ ಬಂದ ಕೂಡಲೆ ನಾನು ಸೀದಾ ವಾರ್ಡಿನ ಕಡೆಗೇ ಹೊರಟೆ. ದಾರಿಯಲ್ಲಿಯೇ ನನಗೆ ಸಾಹೇಬರು ಬೆಟ್ಟಿಯಾದರು. ನನ್ನನ್ನು ನೋಡಿ ಅವರು ನನ್ನ ಹೆಗಲಮೇಲೆ ಕೈಯಿಟ್ಟು ನನ್ನನ್ನು ಹತ್ತಿರೆಳೆದರು. "Thank God, my boy, the mother's safe. Sorry for the child-" ಎಂದು ನಡುಗಿದ ದನಿಯಿಂದ ಹೇಳಿದರು. ನನಗೆ ಹಾರಿದಂತಾಗಿ ನಾನು ಆಪರೇಶನ್ ರೂಮಿನ ಕಡೆಗೆ ಓಡಿದೆ. ಒಳಗೆ ಹೋಗಿ ಆ ಕೂಸಿನ ದೇಹದ ಕಡೆಗೆ-ದೇಹವೆಲ್ಲಿಯದು, ಮಾಂಸದ ಪಿಂಡ-ನೋಡಿದೆ. ನನ್ನ ಚೇತನಾಶಕ್ತಿ ಇಲ್ಲದಂತಾಯಿತು.

'ಆಕೆ'ಗೆ ಕ್ಲೋರೋಫಾರ್ಮದ ಮಬ್ಬು ಇನ್ನೂ ಇಳಿದಿದ್ದಿಲ್ಲ. ನನ್ನ ಕಡೆಗೆ ತಿರುವಿದ ನೋಟದ ಮೇಲಿಂದಂತೂ ಇನ್ನೂ ಮೈಮೇಲೆ

ಸ್ಮೃತಿ ಬಂದಂತೆ ತೋರಲಿಲ್ಲ. ಮೋರೆಯ ಮೇಲೆ ಹುಚ್ಚುಕಳೆ ಸುರಿಯುತ್ತಿತ್ತು. ಅಲ್ಲಿ ನಿಲ್ಲುವದಾಗಲಿಲ್ಲ. ಹೊರಟಿದ್ದು ಟಾಂಗಾದ ಹತ್ತಿರ ಬಂದು ನಿಂತೆ. "ರಾಯರ ಹ್ಯಾಂಗದಾರ್ರಿ?' ನನಗೆ ಯಾರೋ ಚಬಕದಿಂದ ಹೊಡೆದಂತಾಯಿತು. ಚಾಂದನಿಗೆ ಉತ್ತರ ಕೊಡಬೇಕಾದರೆ ನನ್ನ ನಾಲಗೆ ಒಳಗೆ ಸೆಳೆಯುತ್ತಿತ್ತು. "ಅವ!-ಹಾಂ-ನೆಟ್ಟಗಿದ್ದಾರ."

"ನನ್ನ ನೆಪತಾರೇನ್ರಿ ಒಳಗs!"

"ಯಾರನ್ನೂ ಗುರುತಿಲ್ಲಂತೋ. ನನ್ನೂ ಇರಗೊಡಲಿಲ್ಲ." ಮತ್ತೂ ಏನೇನೋ ಹೇಳಿ ಚಾಂದನನ್ನು ಟಾಂಗಾದೊಳಗೆ ಕೂಡಿಸಿ ಮನೆಯ ಕಡೆಗೆ ಹೊರಟೆ.

ಟಾಂಗಾ ಮನೆಗೆ ಬಂದು ನಿಂತಾಗ ಚಾಂದ ದಾರಿಯಲ್ಲಿಯೇ ಇಳಿದು ಹೋದನೆಂದು ತಿಳಿದು ಬಂತು.

೫

'ಅಕ' ಇನ್ನೂ ತವರುಮನೆಯಿಂದ ಬಂದಿದ್ದಿಲ್ಲ. ನಾನೂ ಏನೋ ದಿನ ಕಳೆಯುತ್ತ ನಡೆದಿದ್ದೆ. ಒಂದು ದಿನ ಅಡ್ಡಾಡಿ ಬರಬೇಕೆಂದು ಹೊರಟೆ. ಯಾರೋ ಬಂದು ನನಗೆ ಚಾಂದನ ಸುದ್ದಿ ಹೇಳತೊಡಗಿದರು. ಆತನೇನೋ ಮೊನ್ನೆ,-ಅಥವಾ ೪-೫ ದಿನ ಆಗಿರಬಹುದಷ್ಟೇ- ತನ್ನ 'ಮಹಾಯಾತ್ರೆ' ಬೆಳೆಯಿಸಿದನಂತೆ. ಸುದ್ದಿ ಹೇಳಿದವ ನನಗಾಗಿ ಚಾಂದ ಕೊಟ್ಟಿಟ್ಟದ್ದೊಂದು ಸತವಿನ ಡಬ್ಬಿಕೊಟ್ಟು ಹೋದ.

ಡಬ್ಬಿ ತೆರೆದು ನೋಡಿದೆ. ಒಳಗೆ ಒಂದು ಕಿನಖಾಪಿನ ಚೀಲವಿತ್ತು. ಚೀಲ ಬಿಚ್ಚಿ ನೋಡಿದೆ. ಅದರಲ್ಲಿ ನಾಲ್ಕು ಬಾಲಮೊಡಿಗೆಯ ವಸ್ತುಗಳಿದ್ದವು. ನನ್ನ ಕೈಯಿಂದ ಚೀಲ ಕೆಳಗೇ ಬಿತ್ತು.

'ರಾಯರ'ಂತೂ ಬಂದವರು ತಿರುಗಿ ಹೋದರು. ಅದೇ ಯಾಕೆ ಬರುವ. ಕೇಳಲಿಕ್ಕೆ ಚಾಂದನೂ ಹೋದನೋ ಏನೋ!

# ಭಾವ-ಪ್ರಭಾತ + + + +

ಆಕೆಗೆ ಈವೊತ್ತು ಒಳ್ಳೆಯ ಉಲ್ಲಾಸ. ಗಂಡ ತನ್ನ ವ್ಯವಸಾಯದ ಪ್ರವಾಸದಿಂದ ಅದೆ ದಿನ ಮಧ್ಯಾಹ್ನಕ್ಕೆ ಮರಳಿ ಬಂದಿದ್ದ. ಸಂಜೆಗೇ ಊಟ ಮಾಡುವೆನೆಂದು ಹೇಳಿ ಸ್ವಲ್ಪ ಫಲಾಹಾರ ಮುಗಿಸಿ ಸ್ನೇಹಿತರ ಮನೆಗೆ ಹೊರಟು ಹೋಗಿದ್ದ. ಈಗ ಎರಡು ತಿಂಗಳು ಸಂಜೆಯ ಅಡಿಗೆಯೆ ಇರಲಿಲ್ಲ. ಮಧ್ಯಾಹ್ನಕ್ಕೆ ಮಾಡಿದ್ದರಲ್ಲಿಯೆ ಸಂಜೆಗಾಗಿ ಎಂದು ಹೆಚ್ಚು ಮಾಡಿಟ್ಟು ಅದರಲ್ಲಿ ತಾನು, ಹುಡಿಗೆ ಉಂಡುಬಿಡುತ್ತಿದ್ದರು. ಈ ದಿನ ಎಲ್ಲವೂ ಪರಿಷ್ಕಾರವಾಗಲೆ ಬೇಕು.

ಕಾಯಿಪಲ್ಲೆಗಾಗಿ ಆಳನ್ನು ಪೇಟೆಗೆ ಕಳಿಸಿದಳು. ನಾಲ್ಕು ವ್ಯಂಜನಪದಾರ್ಥಗಳು ಬೇಕೆ ಬೇಕು!— ಪಾಪ! ಪ್ರವಾಸದಲ್ಲಿ ಹೊತ್ತು ಹೊತ್ತಿಗೆ ಊಟ ಸಿಗದಾಗಿ ಎಷ್ಟು ಸೊರಗಿರುವನು!....

ಎರಡು ತಿಂಗಳ ಮೇಲೆ ಈ ಭೆಟ್ಟಿ. ಆತನೂ ಮಾತಿನಲ್ಲಿ ಚತುರ. ಆತನ ಮಾತು ಕೇಳುವದು,– ಪ್ರವಾಸದಲ್ಲಿ ಒದಗಿದ ಅನೇಕ ಪ್ರಸಂಗಗಳ ಶಬ್ದ ಚಿತ್ರವದು,– ಕೇಳುತ್ತ ಕೇಳುತ್ತ ಹಾಗೇ ಮೈಮರೆವಾಗುವದು ಹೊಸ ಮಾತಿರಲಿಲ್ಲ. ಆತನ ಭೆಟ್ಟಿ –! ಆತನ ಸಹವಾಸ, – ಆತನು ಊರಲ್ಲಿಲ್ಲದಾಗಿನ ರುಕ್ಷಜೀವನದ ಪರಿಸಮಾಪ್ತಿ,- ಒಂದು ಶೀತಲ ಸ್ಪರ್ಶ, – ಒಂದು ಆರಾಮ.

ಸಂಜೆಯಾಯಿತು. ಜೀವವು ದಿಕ್ಕು ದಿಕ್ಕಿಗೆ ಹರಿಯತೊಡಗಿತು. ಆತನ ಭೆಟ್ಟಿ,– ಇದೊಂದೆ ವಿಚಾರ. ಮಗುವಿನ ಉಟ ಮುಗಿಸಿ ಮಲಗಿಸಿದಳು. ಅಡಿಗೆಯಾಗುವಷ್ಟರಲ್ಲಿ ಆತನೂ ಬಂದ. ಅವಳ ಹಸಿವು

ಹಿಂಗಿತು. ಆತ ಊಟದಲ್ಲಿ ಒಳ್ಳೆಯ ಸವಿಗಾರ. ನಾಲ್ಕು ಜಿನಸು ಬೇಕು. ಆತನ ಬಾಯಿಂದ ಪ್ರಶಂಸೆಯ ಶಬ್ದಗಳನ್ನು ಕೇಳಿ ಮನಸು ತಣಿಯಿತು. ಮಾತುಮಾತಾಡುತ್ತ ಊಟ ಮುಗಿಯಿತು. ಆಸ್ಥೆಯಿಂದ ಮಾಡಿಟ್ಟ ಎಲೆಪಟ್ಟಿಯನ್ನು ಆತನಿಗೆ ಕೊಟ್ಟು ತಾನೂ ಊಟ ಮುಗಿಸುವ ವಿಚಾರದಲ್ಲಿ ತೊಡಗಿದಳು. ಊಟದ ಮೇಲಷ್ಟು ಇಚ್ಛೆಯಿತ್ತೆಂತಲ್ಲ, ಒಮ್ಮೆ ಮುಗಿಸಿ ಬಿಟ್ಟರಾಯಿತು! – ಹೊರಗಿನಿಂದ ಸಿಗರೇಟಿನ ದರ್ಪ ಬಂದು ಅಡಿಗೆಮನೆಯಲ್ಲಿಡಗಿತು,– ಸವಿ ಎಲೆಪಟ್ಟಿಯ ಮೇಲೆ ಅದೇಕೆ ಬೇಕಾಗಿತ್ತೋ!– ಮತ್ತೊಂದು ಸಲ ಆ ದರ್ಪ ಸುತ್ತಲೂ ಘುಮುಕಿತು. –ಆತನಿಗದು ಬ್ರಹ್ಮಾನಂದ! ಅವಳ ಮೋರೆಯ ಮೇಲೆ ಒಂದು ಮುಗುಳ್ನಗೆ ಮುಗುಳಿತು.

ಊಟ ಮುಗಿಸಿ ಕೈ ತೊಳೆದುಕೊಂಡಳು,–ಆತನು ಮಾತಾಡಿದ್ದು ಕೇಳಬಂತು–" ನಾ ಇದೇ ಈಗ ಕೇಶವನ ಮನೀಗೆ ಹೋಗಿ ಬರತೇನಿ–ಬಾಗಲ ಮುಚಿಗೊ-" —ಕ್ಷಣಹೊತ್ತು ಏನೂ ತಿಳಿಯದಂತಾಯಿತು. ಹಾಲಿಗೆ ಹೆಪ್ಪ ಹಾಕಿ ಉಳಿದವೆಲ್ಲ ಹಾಗೇ ಬಿಟ್ಟು ಮಗುವನ್ನು ಕರಕೊಂಡು ಕೋಣೆಗೆ ನಡೆದಳು—ಕೋಣೆಯಲ್ಲಿ ಸಿಗರೇಟಿನ ದರ್ಪ ಅಡಗಿದ್ದಿಲ್ಲ.

ಮನಸಿಗೆ ಭಕಾಸವೆನಿಸಹತ್ತಿತು....

ಆತನು ಹೋದನು,–ಎಲ್ಲಿ ಹೋಗಿರಬಹುದೆಂಬುದು ಅವಳಿಗೆಗೆ . ತ್ತು–ಕಾಲಸಪ್ಪಳ ಕೇಳಬಂತು. – ಮನೆಯಹತ್ತರ! – ಮನಸು ಆತುರವಾಯಿತು.–ಇಲ್ಲ, ಅದು ಹಾಗೆ ದೂರ ನಡೆಯಿತು. ದಾರಿಯುದ್ದಕ್ಕೆ ಕಾಲಸಪ್ಪಳ,– ಅದರ ಹಿಂದಿನಿಂದ ಇವಳ ಮನಸು ಓಡಿತು. ಆ ದಾ-ರಿಕೆಲಹೊತ್ತು ಕಾಲ ಸಪ್ಪಳ ಕೇಳುವದು ನಿಂತಿತು–ಮನಸಿಗೆ ದಿಕ್ಕು ತಪ್ಪಿ ಅದು ಹರಿದಾಡಹತ್ತಿತು. ಮತ್ತೆ ಆ ಕಾಲ ಸಪ್ಪಳ ಕೇಳಬಂತು– ಮೊದಲಿಗಿಂತ ಹೆಚ್ಚು ಸ್ಪಷ್ಟ. ನಡುವೇ ತೊಡಕು ತೊಡಕಾದ ಎಳೆ ಈಗ ಕೈಗೆ ಸಿಕ್ಕಿತು. ದಾರಿಯುದ್ದಕ್ಕೆ ಆ ಕಾಲಸಪ್ಪಳ–ಮನಸು ಅದನ್ನು ಮತ್ತೆ ಹಿಂಬಾಲಿಸಿತು. ಆ ದಾರಿ – ಆ ಮನೆಯವರೆಗೂ ಬಂತು- ಕಾಲ

ಸಪ್ಪಳ ನಿಂತಿತು. ಮನೆಯ ಬಾಗಿಲ ತೆರೆಯಿತು. ಒಳಗಿನಿಂದ ನಿದ್ದೆಗಣ್ಣಲ್ಲಿ ಯಾವಳೋ–ಯಾವಳೆಂಬುದು ಅವಳಿಗೆ ಗೊತ್ತು,– ಬಂದಳು. ನಿದ್ದೆಯಲ್ಲಿಯೇ ಬೆಚ್ಚಿಬಿದ್ದ ಆ 'ಅವಳು' "ಯಾರು ?" ಎಂದು ಕೇಳಿದಳು. ಉತ್ತರಕ್ಕಾಗಿ ಆತನು ಆ 'ಅವಳ' ಹೆಗಲ ಮೇಲೆ ಕೈಯಿಟ್ಟ, ........ಬಿಚ್ಚಿತ್ತು ಮುಗುಳ್ನಗೆ ನಕ್ಕು ಆ 'ಅವಳು' ಕೊರಳಿಗೆ ಬಿದ್ದಳು,.... ಇಬ್ಬರೂ ಕಾಣದಂತಾದರು.

ಸುತ್ತಲೂ ಮತ್ತೊಮ್ಮೆ ನೋಡಿದಳು. ದೀಪ ಒಂದು ಥಣ ಥಣ ಉರಿಯುತ್ತಿತ್ತು. ಅದರ ಪ್ರಕಾಶವೆಲ್ಲ ಅವನ, ಝಗ್ ಒಂದು ಸೂಕ್ಷ್ಮವಾಗಿ ತಗಲಿದಂತಾಗುತ್ತಿತ್ತು. ಒಂದು ಬಗೆಯ ಸಮೂರ್ತತೆಯು ಅವಳನ್ನಾವರಿಸುತ್ತಿತ್ತು. ಆ 'ಅವಳು',– ಆ 'ಅವಳ'ಲ್ಲಿ ಆತನಿಗಿದ್ದ ಸಂಬಂಧ, ಊರಿಗೆ ಗೊತ್ತಿದ್ದ ಮಾತು. ಆತನ ಮೊದಲನೆಯ ಹೆಂಡತಿ ಇದ್ದಾಗಲೂ ಈ ಸಂಬಂಧವಿದ್ದೇ ಇತ್ತು. ಆತನ ಹೆಂಡತಿಯಿದ್ದಾಗಿನ ಮಾತು. ಅವಳೂ ಒಳ್ಳೆಯ ಪರಿಚಯದವಳು. ಒಂದು ದಿನ ಆತನ ಮನೆಗೆ ರಾತ್ರಿಯ ಊಟಕ್ಕೆ ಹೋಗಿದ್ದಳು. ಆ ದಿನವೂ ಹೀಗೆ ಊಟ ಮುಗಿದ ಕೂಡಲೆ 'ಕೇಶವ'–ಇಲ್ಲ, 'ಗೋವಿಂದ'ನ ಮನೆಗೆ ಹೊರಟು ನಿಂತಿದ್ದ. ಆತನ ಹೆಂಡತಿ ಅಂಗಲಾಚಿ ಬೇಡಿಕೊಂಡಳು– ಎಷ್ಟೋ ಹೊತ್ತು ಆ ಪ್ರಸಂಗ ನಡೆದು ಆತನು ಹೊರಗೆ ಹೋಗುವುದನ್ನೇನು ಬಿಡಲಿಲ್ಲ. ಅವಳ ಅಸೂಯೆ, ಅಥವಾ ವಿಕಾರವಶತೆ ನೋಡಿ ನಗೆ ಬಂದಿತು. ಈಗ–ಈಗ ಅವೆ ಬಡಿಸಿಟ್ಟ ಎಲೆಯ ಮೇಲೆ ತಾನು ಬಂದು ಕುಳಿತಿದ್ದಳು. ತಾನು ವಿಧವೆ,– ತನ್ನವರು ಮನೆಯವರನ್ನು, ಅತ್ತೆಮನೆಯವರನ್ನು,–ಸಮಾಜವನ್ನೆ ತೊರೆದು ಆತನ ಕೈ ಹಿಡಿದಿದ್ದಳು––ಮದುವೆಯಾಗಿದ್ದಳು. ಊರಿಗೆ ಗೊತ್ತಿದ್ದದ್ದು ಅವಳಿಗೂ ಗೊತ್ತಿದ್ದುದೆ. ಮೊದಲು ಮದುವೆಯಾದ ಗಂಡ ಎಲ್ಲಿ ಹೋಗಿರಬಹುದೆಂಬುದು ಯಾರಿಗೂ ಗೊತ್ತಿರದ ಮಾತು. ಹೇಳಿಯೂ ಹೋಗಿರಲಿಲ್ಲ. ಅಜ್ಞಾತಪ್ರದೇಶಕ್ಕೇ ಹೋಗುವವನು,– ಹೇಳಿದರೂ ಯಾರಿಗೆ ತಿಳಿಯಬೇಕು ! ಈಗ ಹೇಳಿ ಹೋದವನು ಹೋದುದೆಲ್ಲಿ ಎಂಬುದು ಪೂರಾ ಗೊತ್ತು. ಮರಳಿ ಬಂದೆ ಬರುವನು,– ತನ್ನ ಬಂಟಿಗತನವು ಹಾಗೇ ಉಳಿಯಿತಲ್ಲ! – ತನಗೆ ಜೊತೆಗೆ ಈ ಹುಡಿಗೆ – ಆತನ ಮಗಳು – ಮೊದಲನೆ

ಯುವಳ ಮುಗಳು – ತನಗೆ ಮಕ್ಕಳಿಲ್ಲ – ಆ ಇನ್ನೊಬ್ಬಳಿಗೆ ! – ಮಕ್ಕಳಿವೆ,– ತಾನು ಬಂಜೆಯೊ !– ತನ್ನ ಸವತಿ,– ಅಲ್ಲಿಯೆ ಇರುವಳಲ್ಲ. ಬಯುಕೆ ಹಿಂಗದ ಜೀವ ! – ಭಾವಚಿತ್ರದ ಕಣ್ಣುಗಳು ತುಸು ಅಲ್ಲಾಡಲಿಲ್ಲವೆ ! ಮಗಳನ್ನು ಎಲ್ಲಿ ಹಿಂಸೆ ಪಡಿಸುವಳೊ ಎಂದು ಭೀತಿ ಇದ್ದಿರಬೇಕು ಮನಸ್ಸಿನಲ್ಲಿ. ಇಲ್ಲ– ಈಗ ಆತನು ಹೀಗೆ ತನ್ನನ್ನು ಬಿಟ್ಟು.... ಹೆಂಗಸರು ಎಂಥಾದರೂ ಮತ್ಸರಿಗಳೆ.

ಕೂಸು ಕಿರಿಕಿರಿ ಮಾಡಹತ್ತಿತು " ಅಣ್ಣಾಽಽ-"

ಆಕೆಯ ಎದೆಯೊಡೆಯಿತು. " ಮಕ್ಕೋ ಮರಿ. ಇಲ್ಲೇ ಇದ್ದಾರ ಅಂಽ ! " ಎಂದು ಕೂಸನ್ನು ತೊಡೆಯ ಮೇಲೆ ಕರಕೊಂಡು ಗಲ್ಲಿಸಹತ್ತಿದಳು – ಅದು ಶಾಂತವಾಗಿ ಮಲಗಿಕೊಂಡಿತು. ತನಗೆ, – ತನಗೆ ನಿದ್ರೆ ಇಲ್ಲ. – ಹಾಳು ಬಾಳುವೆ ! – ಇಂಥವರಿಗೆ ಮದುವೆಯೇತಕೋ ! – ಇನ್ನು ಆತನ ಸಂಬಂಧವೆ ಬೇಡವೆಂದು ನಿಶ್ಚಯಿಸಿಕೊಂಡಳು.

—ಕತ್ತಲು ಹರಿದು ನಸುಕು ತೋರಸೂಸಹತ್ತಿತು. ಪಕ್ಷಿಗಳು ಅನಂತಮುಖವಾಗಿ ಆತನ ಅಪರಾಧವನ್ನು ಸಾರಿ ಹೇಳಿದವು. ಈ ಮುಂದೆ ಆತನ ಸಂಬಂಧ ಸಾಕು – – ಬಾಗಿಲ ತಟ್ಟಿದ ಸಪ್ಪಳವಾಯಿತು – ಮನಸು ಆಕೆಯನ್ನು ಕಟ್ಟಿ ಹಾಕಿತು. ದೇಹ ಬಾಗಿಲ ಬಳಿ ಬಂತು. ಆತ,– ಮುಖದ ಮೇಲೆ ಗೆಲುವಿರಲಿಲ್ಲ. – ಅಪರಾಧ ! – ಸಹಸ್ರಾಪರಾಧ ! – ಆತನ ಕಣ್ಣಲ್ಲಿ ದೀನತೆಯ ಯಾಚಕವೃತ್ತಿ !–ಆ ದೈನ್ಯವನ್ನು ನೋಡಿ ಅವಳಲ್ಲಿ ಕನಿಕರ ಹುಟ್ಟಿತು. ಆತನ ಹೆಗಲ ಮೇಲೇ ಕೈಯಿಟ್ಟಳು – ಅಹುದು – ಆತನಾದರೂ ಎಲ್ಲಿ ಹೋಗಬೇಕು ! ಸುತ್ತಲೂ ಒಂದು ಅಸ್ಫುಟ ಗೀತ ಕೇಳಬಂತು....ಬಾಹ್ಯಶೂನ್ಯಳಾಗಿ ಕಣ್ಣು ಮುಚ್ಚಿದಳು....ಅದೆ ಪ್ರಭಾತವಾಯಿತು.

## ಸಂಪಾದಕೀಯ

ವಿಜಯನಗರ ಸಾಮ್ರಾಜ್ಯಸ್ಮಾರಕೋತ್ಸವ

ಅದೊಂದು ಅಪೂರ್ವ ದೃಶ್ಯ. ವಿಜಯನಗರದ ಆ ವಿಶಾಲವಾದ ವೀಥಿಗಳೂ ಭವ್ಯವಾದ ಗುಡಿಗೋಪುರಗಳೂ ತೀರ ಸಣ್ಣವೆನಿಸಿದವು ಆ ಜನಸ್ತೋಮಕ್ಕೆ. ಎಲ್ಲಿ ನೋಡಿದಲ್ಲಿ ಜನ!—ಜನ! ಸ್ಮಾರಕೋತ್ಸವ ಕಾಲದ ಹಂಪೆಯೆಂದರೆ ಅದೊಂದು ಇರುವೆಯ ಗೂಡು. ಭಾರತೀಯ ಸಂಸ್ಕೃತಿಯ ಸಂರಕ್ಷಣೆಗಾಗಿ ಹಿರಿಯರು ಮಾಡಿದ ವಿಲಕ್ಷಣ ಸಾಹಸದ ಪುಣ್ಯ ಸ್ಮರಣೆಗಾಗಿ ಈ ರೀತಿ ಆನಂದ ಉತ್ಸಾಹಗಳಿಂದ ಇಷ್ಟೊಂದು ಜನರು ನೆರೆದು ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿದ್ದು ಅಭಿನಂದ ನೀಯವಾಗಿದೆ. ಸ್ಮಾರಕೋತ್ಸವದ ಅಧ್ಯಕ್ಷರು ಪೂಜ್ಯ ಗುರುಗಳಾದ ಶ್ರೀಶಂಕರಾಚಾರ್ಯರವರು. ಹಿಂದೂ ಧರ್ಮ ಹಾಗೂ ಹಿಂದೂ ಸಂಸ್ಕೃತಿಯ ಜೀವಾಳವನ್ನು ಅವರು ತಮ್ಮ ಭಾಷಣದಲ್ಲಿ ಸುಗಮವಾಗಿ ವಿವರಿಸಿದರು. ಅವರ ಉಪಸಂಹಾರ ದಭಾಷಣವಂತೂ ಅದ್ವಿತೀಯವಾಗಿತ್ತು; ಬೋಧಪ್ರದವಾಗಿತ್ತು.

ಸಾಹಿತ್ಯೋತ್ಸವದ ಅಧ್ಯಕ್ಷರು ಸಾಹಿತ್ಯಾಚಾರ್ಯರಾದ ಶ್ರೀಮಾನ್ ಬಿ ಎಮ್. ಶ್ರೀಕಂಠಯ್ಯನವರು. 'ಕನ್ನಡ, ಕನ್ನಡತನ, ಕನ್ನಡತಾಯಿ ಕೊರಗಿ ಸೊರಗುತ್ತಲಿರುವಾಗ ನಮ್ಮ ಈ ಔದಾಸೀನ್ಯವು ನಾಚಿಕೆ ಬರುವಂತಹದು.... ಉದಾರಿಗಳಾಗಬೇಕೆಂಬ ಹುಸಿ ಹುಮ್ಮಸ್ಸಿಗೆ ಮರುಳಾಗಿ ಸ್ವಾಭಿಮಾನ ಶೂನ್ಯರಾಗುವುದು ಬೇಡ' ಎಂಬ ಈ ಮಾತುಗಳು ಅವರ ಅಂದಿನ ಭಾಷಣದ ತಳಹದಿಯಾಗಿದ್ದವು. ಪ್ರತಿ ಮಾತಿನಲ್ಲಿಯೂ ಕನ್ನಡದ ಮೇಲಿನ ಅವರ ಅನಂತವಾದ ಆದರ, ವಿಶ್ವಾಸ, ಪ್ರೀತಿ ಇವು ತುಂಬಿ ತುಳುಕುತ್ತಿದ್ದವು. ಸಾಹಿತ್ಯೋತ್ಸವದ ಕಾಲಕ್ಕೆ 'ಸಾಹಿತ್ಯದ ಗುರಿಯು ಮನರಂಜನೆಯೋ ತತ್ತ್ವಸಾಧನೆಯೋ?' ಎಂಬ ವಿಷಯದ ಮೇಲೆ ಚರ್ಚೆಯನ್ನೇರ್ಪಡಿಸಿದ್ದರು. ಅನೇಕ ಸಾಹಿತಿಗಳು ಈ ಚರ್ಚೆಯಲ್ಲಿ ಭಾಗವಹಿಸಿದ್ದರು. ಚರ್ಚೆಯು ತುಂಬಾ ರಂಜಕವೂ

ದರವನ್ನು ವಿಶೇಷವಾಗಿ ಇಳಿಸಿದೆ

ಪ್ರತಿಯೊಬ್ಬರೂ ಬನ್ನಿರಿ!        ಪರೀಕ್ಷಿಸಿ ನೋಡಿರಿ!

ಎಂದೂ-ಎಲ್ಲಿಯೂ-ಯಾರಿಂದಲೂ ದೊರೆಯಲಸಾಧ್ಯವಾದ

## ಸೌಕರ್ಯ-ಸೌಲಭ್ಯ-ಸುವ್ಯವಸ್ಥೆ

ನಮ್ಮಲ್ಲಿವೆ ಎಂಬ ಮಾತು ನಿಮಗೇ ಮನದಟ್ಟಾಗುವುದು.




## ಸದಾ ಸರ್ವದಾ

ನಿಮ್ಮ ಸೇವೆಗೆ ಸಿದ್ಧವಿದೆ.

## ನ್ಯಾಶನಲ್ ಫೋಟೊ ಆರ್ಟ ಸ್ಟುಡಿಯೊ

ರಾಧಾ ಕೃಷ್ಣಪೇಟೆ ಹುಬ್ಬಳ್ಳಿ        ಸ್ಟೇಶನರೋಡ ಗದಗ

# ನಮ್ಮ ಪುಸ್ತಕಗಳು

| | | | | |
|---|---|---|---|---|
| ಪ್ರೇಮದ ೧೧ನೆಯ ಸಂಪುಟ | ಬೆಲೆ | ೨ | ೦ | ೦ |
| ಪ್ರೇಮದ ೧೨ನೆಯ ಸಂಪುಟ | | ೧ | ೮ | ೦ |

## ಏಕಾಂಕ ನಾಟಕಗಳು

| | | | | |
|---|---|---|---|---|
| ನಾಲ್ಕನೆಯ ಪಿಶಾಚಿ | ಶಿವರಾಮ ಕಾರಂತ | ೦ | ೪ | ೦ |
| ಅಶ್ವಮೇಧ | ಶ್ರೀರಂಗ | ೦ | ೪ | ೦ |
| ಹಳೆಗೆಣೆಯರು | ದ. ರಾ. ಬೇಂದ್ರೆ | ೦ | ೨ | ೦ |
| ಸಾಕು ಕೂಸು | ಕೆ. ಗೋಪಾಲಕೃಷ್ಣರಾವ | ೦ | ೨ | ೦ |
| ಕೆಟ್ಟ ಹಟ | ಕುಲಕರ್ಣಿ ಶ್ರೀನಿವಾಸ | ೦ | ೨ | ೦ |
| ಪ್ರೇಮ ನಾಟಕಾವಲಿ | | ೧ | ೦ | ೦ |

## ಸಣ್ಣ ಕತೆಗಳು

| | | | | |
|---|---|---|---|---|
| ನಮ್ಮ ನಾಟಕ | ಕುಲಕರ್ಣಿ ಶ್ರೀನಿವಾಸ | ೦ | ೨ | ೦ |
| ಕಡೇ ಆಟ | ಹ. ಪಿ. ಜೋಶಿ | ೦ | ೨ | ೦ |
| ಗಂಗವ್ವನ ಆಸೆ | ಅ. ನ. ಕೃಷ್ಣರಾಯರು | ೦ | ೩ | ೦ |
| ಮೂರು ಜಾರಿ | ಮೋಪುಂಡಿ ಮಲ್ಲಾರಿ | ೦ | ೨ | ೦ |
| ಘೂಪಸು ಸ್ವರ್ಗಕ್ಕೆ ಹೋದಾಗ | ಎಚ್. ಸೀತಾರಾಮರಾವ | ೦ | ೨ | ೦ |
| ದೇವರ ಪೂಜೆ | ಜಡಭರತ | ೦ | ೨ | ೦ |
| ಪ್ರೇಮ ಕಥಾವಲಿ | | ೧ | ೦ | ೦ |

೧೯೩೭ರ ಪ್ರಾರಂಭದಿಂದ ಪ್ರೇಮದ ಹೊಸ ಚಂದಾದಾರರಾಗುವವರಿಗೆ ಈ ಪುಸ್ತಕಗಳನ್ನು ಅರ್ಧ ಬೆಲೆಗೆ ಕೊಡುತ್ತೇವೆ. ಅಂಚೆ ಹಾಸಲು ಪ್ರತ್ಯೇಕ.

ಪ್ರೇಮ ಪ್ರಕಟನಾಲಯ ಧಾರವಾಡ